# ಕೊಡಗು  ಸಂಗಾತಿ

ಮೇ 16 ರಿಂದ 31, 2000 | ಪಾಕ್ಷಿಕ ಪತ್ರಿಕೆ | (ಬೇಶ 2 ರಿಂದ 17, 2000)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

KA/SK/MYS-88 | ಸಂಪುಟ : 4 | ಸಂಚಿಕೆ : 10 | ಪುಟಗಳು : 24 | ಬೆಲೆ ರೂ. : 6-00

ಚಿತ್ರ : ತಡಿಯಪ್ಪನ ಭವ್ಯ ಕುಮಾರಜಯ, ಮೈಸೂರು

## ಅರೆಭಾಷೆ ಗೌಡರ ಮದುವೆ ಸಂಪ್ರದಾಯುದ ಕಂಚಿಮಿಯ ಮಧ್ಯೆ ಹೂ ಹಿಂಗಾರ

## ಮೊದಲನೆ ವರ್ಷದ ಹುಟ್ಟು ಹಬ್ಬದ ಶುಭಾಶಯಗಳು.



ಜಿ.ವಿ. ಪ್ರಿತ್ವಿ
**(G. V. PRITHVI)**

**ದಿನಾಂಕ : 21-5-2000**

ಗುಡ್ಡೇರ ಡಾ. ಲತಾ ಮತ್ತು ವೇಣು ದಂಪತಿಗಳ ದ್ವಿತೀಯ ಪುತ್ರ
HARTFORD,CONNECTICUT, U.S.A.

ಪ್ರಪಂಚದ ಯಾವ ಮೂಲೆಯಲ್ಲಿ ಹುಟ್ಟಿ ಬೆಳೆದು, ಜೀವಿಸಿದರೇನಂತೆ ! ಆದರೆ ಎಂದೆಂದಿಗೂ ನೀನು ಭಾರತೀಯನಾಗಿದ್ದು, ಆರೋಗ್ಯ, ಸುಖ, ಸಂತೋಷದಿಂದ, ದೈವಭಕ್ತನಾಗಿದ್ದು ನೆಮ್ಮದಿಯಿಂದ ನಗುನಗುತಲೇ ಬಾಳೆಂದು ನಿನ್ನ ಮೊದಲಿನಹುಟ್ಟು ಹಬ್ಬದ ದಿನ ಹಾರೈಸುವ ನಂಗಾರು ತಾತ, ಅವ್ವ,ರಕ್ತ ಒಡನಾಡಿಗಳಾದ ಪಿಂಕಿ, ರಿಕ್ಕಿ, ಆಕಾಶ್,ಚಿಂಕಿ, ಭುವನ್, ದಿವ್ಯ ಮತ್ತು ವಿಕ್ಕಿ.

— ನಂಗಾರು ಅಪ್ಪಾಜಿ. ಬೆಂಗಳೂರು.

---

### ಬೈತಡ್ಕ ಜಾನಕಿ ಬೆಳ್ಯಪ್ಪ ಸಂಗ್ರಹ ವಿರಚಿತ " ಹಸೆಮಣೆ " ಪುಸ್ತಕ, ಶೀಘ್ರದಲ್ಲಿ ಬಿಡುಗಡೆ : ನಿರೀಕ್ಷಿಸಿ !

ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಅರೆಗನ್ನಡ (ಅರೆಭಾಷೆ ) ಗೌಡ ಜನಾಂಗದ ಸಂಸ್ಕೃತಿಯನ್ನು ಪ್ರತಿಬಿಂಬಿಸುವ, ಮುಂದಿನ ಪೀಳಿಗೆಗೆ ರವಾನಿಸಲಿರುವ " ಹಸೆಮಣೆ " ಎಂಬ ಶಿರೋನಾಮೆಯ ಸೋಬಾನೆ, ದುಂಬಿ, ಸುವ್ವಿ, ಹರಿಸೇವೆಹಾಡು, ಜನಪದ ಗೀತೆಗಳು, ಹೊನ್ನಮ್ಮ ಕಥಾನಾಟಕ ಇತ್ಯಾದಿಗಳನ್ನೆಲ್ಲ ಒಳಗೊಂಡ ಪುಸ್ತಕವು ಸಧ್ಯದಲ್ಲಿಯೇ ಬಿಡುಗಡೆಗೊಳ್ಳಲಿದೆ. ಇದನ್ನು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಬರೆದಿದ್ದಾರೆ ಶ್ರೀಮತಿ ಬೈತಡ್ಕ ಜಾನಕ್ಕಿ ಬೆಳ್ಯಪ್ಪನವರು.

— ಸಂಪಾದಕಿ

---

## ಅರೆಭಾಷೆ ಮತ್ತು ಸಂಸ್ಕೃತಿ ಬಗ್ಗೆ ಸಂಶೋಧನೆ.

ಒಂದು ದೇಶ ಪ್ರಗತಿ ಹೊಂದಲು ಅಲ್ಲಿಯ ಜನರು ವಿದ್ಯಾವಂತರು, ಸುಸಂಸ್ಕೃತರು ಆಗಬೇಕು. ಐಕ್ಯತೆ ಮತ್ತು ಏಕತಾ ಭಾವನೆ ಇರಬೇಕು. ಆ ಜನರ ಆಚಾರ, ವಿಚಾರ, ಭಾಷೆ, ಸಂಸ್ಕೃತಿ, ಸಂಪ್ರದಾಯಗಳ ಬಗ್ಗೆ ಪ್ರತಿಯೊಬ್ಬನಿಗೂ ತಿಳಿದಿರಬೇಕು. ಅಂದ ಹಾಗೆ ಒಂದು ಅಂದಾಜಿನಂತೆ ಅರೆಭಾಷೆ ಗೌಡರು ಸುಮಾರು 5 ಲಕ್ಷದಷ್ಟು ಜನರು ದೇಶದ ನಾನಾ ಭಾಗಗಳಲ್ಲಿ ಪಸರಿಸಿರವುದು ತಿಳಿದು ಬಂದಿದೆ. ಹಾಗಾಗಿ ಅರೆಭಾಷೆ ಗೌಡರ ಬಗ್ಗೆ ಹೆಚ್ಚಿನ ಈಗ ಲಭ್ಯವಿರುವ ತಿಳುವಳಿಕೆ ಮಾಹಿತಿಗಳು ಏನೇನೂ ಸಾಲದು. ನಾವು ಯಾವ ಯಾವ ಬುಡಕಟ್ಟಿನವರು,ನಮ್ಮ ಆಚಾರವೇನು, ಎತ್ತಲಿಂದ ಬಂದವರು, ನಮ್ಮ ಜೀವಾಣು ಎಂತದ್ದು ಎಂದು ಯಾರಿಗೂ ತಿಳಿದಿಲ್ಲ. ಇದರ ಬಗ್ಗೆ ಡಾ.ಪುರುಷೋತ್ತಮ ಗೌಡರು ಮತ್ತು ಡಾ.ಕೋಡಿ ಕುಶಾಲಪ್ಪ ಗೌಡರು ಮಾತ್ರವೇ ಅರೆಭಾಷೆ, ಗೌಡರ ಸಂಸ್ಕೃತಿ ಮತ್ತು ಭಾಷೆ ಬಗ್ಗೆ ಬೆಳಕು ಚೆಲ್ಲಿರುತ್ತಾರೆ.ಆದರೆ ಸಾಲದು. ಸಂಶೋಧನೆ ಮಾಡುವ ಆಸಕ್ತ ವಿದ್ಯಾರ್ಥಿಗಳಿದ್ದರೆ ದಯವಿಟ್ಟು ಸಂಗಾತಿಯನ್ನು ಸಂಪರ್ಕಿಸುವುದು.

— ಸಂಪಾದಕಿ

---

### ಬಡ್ಡನ ರಾಜ್ ಚೆಂಗಪ್ಪನವರಿಂದ ಪುಸ್ತಕ ಬಿಡುಗಡೆ

ಕೊಡಗಿನ ನಮ್ಮ ಜನಾಂಗದ ಏಕೈಕ ಖ್ಯಾತ ಆಂಗ್ಲ ಭಾಷೆಯ ಬರಹಗಾರರಾದ ಶ್ರೀ ಬಡ್ಡನ ರಾಜ್ ಚೆಂಗಪ್ಪನವರು (Deputy editor, India to-day) ಇವರು ಈಗ್ಯೆ " WEAPONS OF PEACE" ಎಂಬ ಪುಸ್ತಕವನ್ನು ಬರೆದಿರುವರು. ಈ ಪುಸ್ತಕದಲ್ಲಿ ಭಾರತದ ವಿಜ್ಞಾನಿಗಳು ಇದುವರೆಗೆ ರಾಜಸ್ಥಾನದ " ಪೋಕ್ರಾನ್ " (POKHRAN)ನಲ್ಲಿ ಸ್ಫೋಟಿಸಿದ ಎಲ್ಲಾ ಅಣುಬಾಂಬುಗಳ ವಿವರ ಅಂದರೆ ಸರಕಾರದ ಪ್ರೋತ್ಸಾಹ, ಎಲ್ಲಿ ತಯಾರಿಸಿದ್ದು, ಎಷ್ಟುಭಾರ,ಎಷ್ಟು ಪ್ರಬಲ, ತಯಾರಿಕೆಯ ವಿಜ್ಞಾನಿಗಳ ತಂಡ,ಅದನ್ನು ಹೇಗೆ ಸ್ಫೋಟಿಸುವ ಸ್ಥಳಕ್ಕೆ ಕೊಂಡೊಯ್ಯಲಾಯ್ತು, ಗುಪ್ತಚಾರರ ಕೆಲಸ (Security) ಇವೇ ಮುಂತಾದ ಎಲ್ಲಾವಿವರಗಳನ್ನು ಕೊಡಲಾಗಿದೆ.

Weapons of peace, the secret story of India's quest to be a nuclear power by Raj chengappa, Published by Harper collins Publishers, India' priced Rs. 395/=

— ನಂಗಾರು ಅಪ್ಪಾಜಿ. ಬೆಂಗಳೂರು

 ಒಳನೋಟ

2000, ಮೇ 16-31 ರ ತನಕ






| | |
|---|---|
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. **ಫೋನ್ : 0821/516771** |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ | **ಬೈತಡ್ಕ ಜಾನಕಿ ಬೆಳ್ಯಪ್ಪ,** ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/28047** |
|  ಸಂಗಾತಿ ಚಿಹ್ನೆ ಮತ್ತು ಅರೆಭಾಷೆ ಕ್ಯಾಸೆಟ್ ಲಭ್ಯ | **ಪಾಂಡ್ಯನ್ ಕ್ಯಾಸೆಟ್ ಅಂಗಡಿ,** ಖಾಸಗಿ ಬಸ್ ನಿಲ್ದಾಣ, ಮಡಿಕೇರಿ **ಫೋನ್ :** 08272/29620 |
|  ಕುಶಾಲ ನಗರ | **ಕುಂಭಗೌಡನ ಸೋಮಣ್ಣ,** ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 **ಫೋನ್ :** 08276/73370 |
|  ಬೆಂಗಳೂರು ಮಹಾನಗರ | **ಅಮ್ಮಾಜೀರ ಪೊನ್ನಪ್ಪ,** 20, 1ನೇ ಮೈನ್, 4ನೇ ಕ್ರಾಸ್, ಸಾಕಮ್ಮ ಗಾರ್ಡನ್, ಬಸವನಗುಡಿ, ಬೆಂಗಳೂರು - 04, **ಫೋನ್ :**080/6342822 |
|  ಬೆಂಗಳೂರು ಮಹಾನಗರ | **ಕಲ್ಲುಮುಟ್ಲು ಬಸಪ್ಪ,** ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19,**ಫೋನ್ :** 080/6500946 |

 **ಚಂದಾ ವಿವರ :** ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **6** ರೂ., ಅರ್ಧ ವಾರ್ಷಿಕ -**75** ರೂ., ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಳಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಕಾಫಿ ಬೆಲೆ ಕುಸಿತ

ಕೊಡಗಿನಲ್ಲಿ ಮುಖ್ಯ ವಾಣಿಜ್ಯ ಬೆಳೆಯಾದ ಕಾಫಿಯ ಬೆಳೆ ಕುಸಿದು ಕಾಫಿ ಬೆಳೆಗಾರರು ದಿಗ್ಭ್ರಾಂತರಾಗಿದ್ದಾರೆ. ಕಾಫಿ ಬೆಳೆಯುವುದಕ್ಕಾಗಿ ದಟ್ಟವಾದ ಕಾಡನ್ನು ಕಡಿದು ಸುಟ್ಟು ಕಾಫಿ ಬೆಳೆಯನ್ನು ಪ್ರಾರಂಬಿಸಿದರು. ಯಾಲಕ್ಕಿ ತೋಟದವರು ತಮ್ಮ ತೋಟದಲ್ಲಿದ್ದ ಅಮುಲ್ಯ ಮರಗಳನ್ನು ಕಡಿದು ಮಾರಿ ಕಾಫಿ ತೋಟ ಮಾಡಿದರು. ಈಗ ಅತ್ತ ಯಾಲಕ್ಕಿಯೂ ಇತ್ತ ಕಾಫಿ ಬೆಳೆಗೆ ಬೆಲೆಯೂ ಇಲ್ಲದೆ ತ್ರಿಶಂಕು ಸ್ವರ್ಗವಾಗಿದೆ. ಇದಕ್ಕೆಲ್ಲಾ ಕಾರಣವೇನು? ಜನರ ಅತಿ ಆಶೆಯೇ ಈ ರೀತಿಯ ತೊಂದರೆಗಳಿಗೆ ಕಾರಣ. ಚಿನ್ನದ ಮೊಟ್ಟೆ ಇಡುವ ಕೋಳಿಯನ್ನೇ ಕೊಂದು ಒಂದೇ ಸಲಕ್ಕೆ ತುಂಬಾ ಚಿನ್ನ ಸಿಗಬಹುದೆಂಬ ಕಥೆಯಂತಾಗಿದೆ ನಮ್ಮ ರೈತರ ಪಾಡು. ನಮ್ಮ ಜನರ ಯೋಜನೆಗಳು ತನ್ನ ಜೀವನದಲ್ಲಿ ಸುಖ ಪಡುವಷ್ಟಕ್ಕೆ ಮಾತ್ರವಲ್ಲದೆ ತನ್ನ ಮುಂದಿನ ಪೀಳಿಗೆಯ ದೂರದ ಆಲೋಚನೆಯೇ ಇಲ್ಲದೆ ಮಾಡುತ್ತಿರುವ ಕೆಲಸಗಳಿಂದಾಗಿ ಈ ವಿಧದ ಕಷ್ಟಕ್ಕೆ ಬೀಳುವ ಸ್ಥಿತಿ ಬಂದಿದೆ. ಇದ್ದುದರಲ್ಲಿ ತೃಪ್ತಿಪಟ್ಟು ತನ್ನ ಮುಂದಿನ ಪೀಳಿಗೆಯ ಭವಿಷ್ಯದತ್ತ ಗಮನ ಹರಿಸೊ ಜನರ್‍ಯಾರಿದ್ದಾರೆ.

ನಮ್ಮ ಜನರ ದೃಷ್ಠಿ ಮೂಕುಡೆ ಹಾಕಿದ ಕುದುರೆಯಂತೆ ಅಥವಾ ರೈಲು ಕಂಬಿ ಇರುವ ರೈಲು ರಸ್ತೆಯಂತೆ ಒಂದೇ ಕಡ್ಡೆಯ ದೃಷ್ಟಿ ಇರುವುದರಿಂದಲೇ ಈ ಪರಿಸ್ಥಿತಿಗೆ ಕಾರಣ.

ಕಾಫಿ ಬೆಲೆ ಕುಸಿತದಿಂದ ಇಲ್ಲಿಯವರೆಗೆ ಅನುಭವಿಸುತ್ತಿದ್ದ ಜೀವನ ಸೌಲಭ್ಯಗಳನ್ನು ಎಟುಕಿಸುವ ದಾರಿಯನ್ನು ಕಾಣಬೇಕಾಗಿದೆ.

ಕಾಫಿ ಬೆಳೆಯ ಜೊತೆಯಲ್ಲಿ ಹಣತರುವ ವಾಣಿಜ್ಯ ಬೆಳೆಯನ್ನು ಉತ್ಪಾದಿಸುವ ವ್ಯವಹಾರಗಳನ್ನು ಜನರೂ ಸರ್ಕಾರವೂ ಹಮ್ಮಿಕೊಳ್ಳಬೇಕು. ಕೊಡಗಿನಲ್ಲಿ ಕೇರಳೀಯರು ಒಂದು ವಾರಕ್ಕೆ ಸುಂಟಿ ವ್ಯವಸಾಯ ಶುರು ಮಾಡುತ್ತಿದ್ದಾರೆ. ಇದೇ ವ್ಯವಸಾಯವನ್ನು ಸ್ಥಳೀಯರೇ ಯಾಕೆ ಮಾಡಲಾಗದು?.

ನಮ್ಮ ಸ್ಥಳೀಯರಲ್ಲಿ ಕೇರಳೀಯರ ಹಠ, ವ್ಯವಸಾಯದ ಕ್ರಮ ಹಾಗೂ ಮಾರುಕಟ್ಟೆಯನ್ನು ಹುಡುಕುವ ಚಾತಿ ಇಲ್ಲದಿರುವುದೇ ಇದಕ್ಕೆ ಕಾರಣ. ಇದಕ್ಕಾಗಿ ನಮ್ಮ ಸಹಕಾರ ಸಂಘಗಳು ರೈತರಿಗೆ ಬೇಕಾದ ಗೊಬ್ಬರ ಬೀಜ ಮತ್ತು ಮಾರಾಟ ಮಾಡುವ ಏರ್ಪಾಡು ಮಾಡಿದ್ದಾರೆ. ಶುಂಠಿ ಬೆಳೆಯನ್ನು ನಮ್ಮ ರೈತರೂ ಬೆಳೆದು ಕಾಫಿಯ ಬೆಳೆ ಕುಸಿತದ ನಷ್ಟವನ್ನು ಭರ್ತಿಮಾಡುವ ಹಾದಿಯನ್ನು ಕಾಣಬಹುದೆಂದು ಸಂಗಾತಿಯ ಅನಿಸಿಕೆ.

---

## ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಜಿಯವರಿಂದ ಬೆಂಗಳೂರಿನಲ್ಲಿ ರಾಷ್ಟ್ರೀಯ ಮಟ್ಟದ ಪತ್ರಿಕೋದ್ಯಮ ಸಂಗ್ರಹಾಲಯ



ಆದಿ ಚುಂಚನಗಿರಿ ಮಠದ ಬಾಲಗಂಗಾಧರನಾಥ ಸ್ವಾಮೀಜಿ ಅವರ ನೇತೃತ್ವದಲ್ಲಿ ಪ್ರಾರಂಭಿಸಲಾಗುವ ಪತ್ರಿಕೋದ್ಯಮ ಅಧ್ಯಯನ ಕೇಂದ್ರದಲ್ಲಿ ರಾಷ್ಟ್ರೀಯ ಮಟ್ಟದ ಪತ್ರಿಕೋದ್ಯಮ ಸಂಗ್ರಹಾಲಯ ಸ್ಥಾಪಿಸುವುದಾದರೆ ಒಂದು ಕೋಟಿ ರೂಪಾಯಿ ನೀಡಲು ಸಿದ್ಧ ಎಂದು ಕೇಂದ್ರದ ಸಂಸ್ಕೃತಿ ಸಚಿವ ಅನಂತ ಕುಮಾರ್‌ರವರು ಬೆಂಗಳೂರಿನಲ್ಲಿ ಇತ್ತೀಚೆಗೆ ತಿಳಿಸಿದರು.

ನಗರದ ಹೊರ ವಲಯದಲ್ಲಿ ಪ್ರಾರಂಭಿಸಲಾಗುವ 'ಭಾರತೀಯ ಪತ್ರಿಕೋದ್ಯಮ ಮತ್ತು ಹೊಸ ಮಾಧ್ಯಮ' ಅಧ್ಯಯನ ಸಂಸ್ಥೆಯ ಕಟ್ಟಡದ ಶಿಲಾನ್ಯಾಸ ನೆರವೇರಿಸಿ ಮಾತನಾಡುತ್ತಿದ್ದ ಅವರು ರಾಷ್ಟ್ರೀಯ ಪತ್ರಾಗಾರದ ಮಾದರಿಯಲ್ಲಿ ಪತ್ರಿಕೋದ್ಯಮದ ಇತಿಹಾಸ ಮತ್ತು ಪ್ರಸ್ತುತ ಸ್ಥಿತಿಯ ಬಗ್ಗೆ ಸಮಗ್ರ ಕಲ್ಪನೆ ಮೂಡಿಸುವಂಥ ಸಂಗ್ರಹಾಲಯವನ್ನು ಸ್ಥಾಪಿಸಲು ಮಾಹಿತಿ ತಂತ್ರಜ್ಞಾನದ ರಾಜಧಾನಿಯಾಗಿರುವ ಬೆಂಗಳೂರೇ ಸೂಕ್ತ ಎಂದು ಅಭಿಪ್ರಾಯಪಟ್ಟರು.

ಜಗತ್ತಿನ ಪ್ರಮುಖ ಪತ್ರಿಕೆಗಳ ಪ್ರಾರಂಭದ ಸಂಚಿಕೆಗಳ ಸಂಗ್ರಹ, ಮುದ್ರಣಾಲಯಗಳು ವಿಕಾಸಗೊಂಡ ರೀತಿ, ಆಧುನೀಕರಣದಿಂದ ಪತ್ರಿಕೋದ್ಯಮ ಬದಲಾದ ಬಗ್ಗೆ ಮುಂತಾದ ವಿಷಯಗಳ ಕುರಿತು ಜನಸಾಮಾನ್ಯರಿಗೆ ಅರಿವು ಮೂಡಿಸುವುದು ಇಂತಹ ಸಂಗ್ರಹಾಲಯದಿಂದ ಸಾಧ್ಯಾ. ಇದಕ್ಕೆ ಒಂದು ಕೋಟಿ ರೂಪಾಯಿ ಮೀಸಲಿಡಲಾಗುವುದ ಎಂದು ಭರವಸೆ ನೀಡಿದರು.

ಕಂಪ್ಯೂಟರ್ ಕ್ರಾಂತಿ ಎಷ್ಟೇ ವೇಗವಾಗಿ ನಡೆದರೂ ಸಹ ಅದರಿಂದ ಪತ್ರಿಕಾ ಮಾಧ್ಯಮಕ್ಕೆ ಏನೇನೂ ತೊಂದರೆಯಿಲ್ಲ. ಕಾರಣ ಮುದ್ರಣಗೊಂಡ ವಿಷಯಗಳಿಗೆ ಯಾವತ್ತೂ ಸಾವಿಲ್ಲ. ಅಮೇರಿಕಾದಲ್ಲಿ ಕಂಪ್ಯೂಟರ್, ಇಂಟರ್‌ನೆಟ್ ಮಾಧ್ಯಮಗಳು ಎಷ್ಟೇ ಪ್ರಬಲವಾಗಿ ಬೆಳೆದರೂ ಪತ್ರಿಕೆಗಳ ಪ್ರಸಾರ ದಿನೇದಿನೇ ವೃದ್ಧಿಯಾಗುತ್ತಲೇ ಇದೆ ಎಂದು ಅವರು ನಿದರ್ಶನ ನೀಡಿದರು.

ಮುಖ್ಯ ಅತಿಥಿಯಾಗಿದ್ದ ರಾಜ್ಯದ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಡಿ.ಬಿ. ಚಂದ್ರೇಗೌಡ ಅವರು

ಮುಂದಿನ ಪುಟಕ್ಕೆ

---

ರೊಟ್ಟಿಗೆ ಬಿಟ್ಟ ಪಿಟ್ಟಿಲ್ಲ, ಅಳಿಯುಂಗೆ ಬಿಟ್ಟ ನೆಂಟ ಇಲ್ಲ

# ಸಂಸ್ಕೃತಿ ರಕ್ಷಣೆಗೆ ಭಾಷೆಯ ರಕ್ಷಣೆ ಅನಿವಾರ್ಯ – ಡಾ. ಫೆಲಿಕ್ಸ್ ಮಾರ್ಟಿ

ಭಾಷೆಗೆ ಧರ್ಮ ಮತ್ತು ಸಂಸ್ಕೃತಿಯ ಸಂಬಂಧವಿದೆ. ಯಾವುದೇ ಸಂಸ್ಕೃತಿ ಮತ್ತು ಧರ್ಮದ ರಕ್ಷಣೆ ಮಾಡಬೇಕಾದರೆ ಅದಕ್ಕೆ ಸಂಬಂಧವಿರುವ ಭಾಷೆಯನ್ನು ರಕ್ಷಿಸುವುದು ಅನಿವಾರ್ಯ ಎಂದು ಭಾಷಾವೈವಿಧ್ಯ ಮತ್ತು ಬಹುಭಾಷಾ ಶಿಕ್ಷಣ ಕುರಿತ ವಿಶ್ವ ಸಂಸ್ಥೆಯ ಶಿಕ್ಷಣ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಘಟನೆಯ (ಯುನೆಸ್ಕೊ) ಅಧ್ಯಯನ ಸಮಿತಿಯ ಮುಖ್ಯಸ್ಥ ಡಾ. ಫೆಲಿಕ್ಸ್ ಮಾರ್ಟಿ ತಿಳಿಸಿದ್ದಾರೆ.

ಜಾಗತೀಕರಣವೂ ಸೇರಿದಂತೆ ಹಲವು ಕಾರಣಗಳಿಂದ ಹಲವು ಭಾಷೆಗಳು ನಶಿಸಿಹೋಗಿವೆ. ಕೆಲವು ವಿನಾಶದ ಅಂಚಿನಲ್ಲಿವೆ. ಭಾಷೆಯ ಅವನಾಸದ ಜೊತೆಯಲ್ಲಿ ಆ ಭಾಷೆ ಮಾತನಾಡುವ ಜನರ ಸಂಸ್ಕೃತಿ ಹಾಗೂ ಅವರ ಬದುಕಿನ ಅನನ್ಯತೆಯೂ ನಾಶವಾಗುತ್ತದೆ. ಒಂದು ಪ್ರಾಣಿ ಅಥವಾ ಒಂದು ಸಸ್ಯ ಸಂತತಿ ರಕ್ಷಣೆಯಷ್ಟೆ ಮುಖ್ಯವಾದದ್ದು ಭಾಷೆಯ ರಕ್ಷಣೆ ಎಂದು ಅವರು ಇತ್ತೀಚೆಗೆ ನೀಡಿದ ಸಂದರ್ಶನದಲ್ಲಿ ತಿಳಿಸಿದ್ದಾರೆ.

ಭಾರತ ಹಾಗೂ ವಿಶ್ವಾದ ಭಾಷಾ ಪರಂಪರೆ ವಿಷಯ ಕುರಿತು ಮೈಸೂರಿನ ಭಾಷಾ ಅಧ್ಯಯನ ಸಂಸ್ಥೆ ಸಂಘಟಿಸಿರುವ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಭಾಗವಹಿಸಲು ಡಾ. ಫೆಲಿಕ್ಸ್ ಹಾರ್ಟಿ ಮೈಸೂರಿಗೆ ಬಂದಿದ್ದರು.

ವಿಶ್ವದಲ್ಲಿ ಪ್ರಸ್ತುತ ಸುಮಾರು 6000ಭಾಷೆಗಳಿವೆ. ಪ್ರತಿ ಭಾಷೆಗೂ ತನ್ನದೇ ಆದ ಇತಿಹಾಸ, ಪರಂಪರೆ ಹಾಗೂ ಸಂಕೀರ್ಣತೆ ಇದೆ. ಹಾಗೆಯೇ ಇಂದು ಭಾಷೆಗಳನ್ನು ಉಳಿಸಿಕೊಳ್ಳುವುದು ಅಗತ್ಯವಾಗಿದೆ. ಭಾಷೆಯ ಅಧ್ಯಯನ ಮಾನವ ಇತಿಹಾಸದ ಅಧ್ಯಯನ ಎಂದು ಅವರು ಹೇಳಿದರು.

ಭಾರತ ವಿವಿಧ ರೀತಿಯ ಪ್ರದೇಶ, ಜನಾಂಗಗಳು ಹಾಗೂ ಬಹುಭಾಷೆಗಳ ಆಗರ. ಭಾಷಾ ವೈವಿಧ್ಯ ಭಾರತದಲ್ಲಿ ನಿಜವಾದ ಅರ್ಥದಲ್ಲಿ ಇದೆ. ಬಹುಭಾಷಿಕತೆಗೆ ಭಾರತದಲ್ಲಿರುವಂಥ ಮಾನ್ಯತೆ ವಿಶ್ವದ ಹಲವು ದೇಶಗಳಲ್ಲಿ ಕಾಣುವುದಿಲ್ಲ. ಅಲ್ಲಲ್ಲಿ ಮತ್ತು ಆಗಾಗ್ಗೆ ಭಾಷಾ ದುರಭಿಮಾನದ ಘಟನೆಗಳು ನಡೆದರೂ ಒಟ್ಟಾರೆ ಬಹುಭಾಷಾ ಸಂಸ್ಕೃತಿ ಭಾರತದಲ್ಲಿ ನೆಲೆಯೂರಿದೆ ಎಂದು ಅವರು ಹೇಳಿದರು. ಭಾಷೆಯ ವಿವಿಧ ಮುಖಗಳ ಅಧ್ಯಯನಕ್ಕೆ ಭಾರತ ಉತ್ತಮ ಪಾತಳಿಯನ್ನು ಒದಗಿಸಲಿದೆ ಎಂದೂ ಅವರು ಹೇಳಿದರು.

ಭಾಷೆಗಳಿಗೆ ಸಂಬಂಧಿಸಿದಂತೆ ಜಗತ್ತಿನ ವಿವಿಧ ಭಾಗ ಗಳಲ್ಲಿರುವ ಪರಿಸ್ಥಿತಿ, ವಿವಿಧ ಭಾಷೆಗಳು ಎದುರಿಸುತ್ತಿರುವ ಸಮಸ್ಯೆಗಳು, ಭಾಷೆಗಳ ನಾಶಕ್ಕೆ ಕಾರಣ ಹಾಗೂ ಈಗ ನಾಶದ ಅಂಚಿನಲ್ಲಿರುವ ಭಾಷೆಗಳ ಪರಿಸ್ಥಿತಿ ಬಗ್ಗೆ ಅಧ್ಯಯನ ನಡೆಸುತ್ತಿರುವುದಾಗಿ ಹೇಳಿದ ಅವರು ಮುಂದಿನ ಒಂದುವರೆ ವರ್ಷಗಳಲ್ಲಿ ಯುನೆಸ್ಕೋಗೆ ವರದಿಯನ್ನು ಸಲ್ಲಿಸುವುದಾಗಿ ತಿಳಿಸಿದ್ದಾರೆ.

ಈ ವರದಿಯ ಆಧಾರದ ಮೇಲೆ ಯುನೆಸ್ಕೊ ವಿವಿಧ ದೇಶಗಳ ಸರ್ಕಾರಗಳಿಗೆ, ಶಿಕ್ಷಣ ಸಂಸ್ಥೆಗಳಿಗೆ, ಧಾರ್ಮಿಕ ಸಂಘಟನೆಗಳಿಗೆ ತನ್ನ ಶಿಫಾರಸ್ಸುಗಳನ್ನು ಕಳುಹಿಸಲಿದೆ. ಈ ಶಿಫಾರಸ್ಸುಗಳನ್ನು ಜಾರಿಗೊಳಿಸುವುದರಿಂದ ನಶಿಸುತ್ತಿರುವ ಭಾಷೆ, ಆ ಭಾಷೆಯನ್ನು ಆಡುವ ಜನರ ಧರ್ಮ ಹಾಗೂ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳಬಹುದಾಗಿದೆ ಎಂದಿದ್ದಾರೆ.

ಅಧ್ಯಯನದ ಅಂಗವಾಗಿ ಈಗಾಗಲೇ ವಿಶ್ವಾದಲ್ಲಿ ಒಂದು ಸಾವಿರಕ್ಕೂ ಹೆಚ್ಚು ಪ್ರಶ್ನಾವಳಿಯನ್ನು ಕಳುಹಿಸಲಾಗಿದೆ. ಈ ಪೈಕಿ ಈಗಾಗಲೇ 750 ಸಂಘಟನೆಗಳಿಂದ ಉತ್ತರಗಳು ಬಂದಿವೆ. ಉಳಿದ ಸಂಘಟನೆಗಳಿಂದ ಉತ್ತರಗಳನ್ನು ಶೀಘ್ರದಲ್ಲಿ ನಿರೀಕ್ಷಿಸಲಾಗಿದೆ. ಸಮಿತಿಯ ತಜ್ಞರು ಈಗಾಗಲೇ ರಷ್ಯಾ, ಬೊಲಿವಿಯಾ ಹಾಗೂ ಆಫ್ರಿಕಾ ದೇಶಗಳಿಗೆ ಭೇಟಿ ನೀಡಿ ಮಾಹಿತಿ ಸಂಗ್ರಹಿಸಿದೆ ಎಂದು ಡಾ. ಫೆಲಿಕ್ಸ್ ಮಾರ್ಟಿ ಅವರು ಭಾರತಕ್ಕೆ ಬಂದಿದ್ದಾಗ ತಿಳಿಸಿದ್ದಾರೆ.

**ಕೃಪೆ : ಪ್ರಜಾವಾಣಿ**

---

ಹಿಂದಿನ ಪುಟದಿಂದ

ಮಾತನಾಡಿ, ಸತ್ಯ ಶೋಧನೆಗೆ ಪ್ರೇರೇಪಿಸುವಂಥ ಮನೋಭಾವವನ್ನು ಸುದ್ದಿಗಾರರಲ್ಲಿ ಬೆಳೆಸುವಂಥ ತರಬೇತಿ ಈಗ ಅಗತ್ಯವೆಂದು ಪ್ರತಿಪಾದಿಸಿದರು.

ಸರ್ಕಾರವು ಪೊಲೀಸರನ್ನು ಬೇಕಾದರೂ ಹೆದರಿಸಬಹುದು. ಆದರೆ ಪತ್ರಿಕೆಗಳ ಅಭಿಪ್ರಾಯಗಳಿಗೆ ಮಾತ್ರ ಸರ್ಕಾರವಾಗಲೀ ಸಚಿವರಾಗಲೀ ತಗ್ಗಿಬಗ್ಗಿ ನಡೆಯಬೇಕಾಗುತ್ತದೆ. ರಾಜಕಾರಣಿಗಳಿಗೆ ಮಾತು ಮತ್ತು ಕೃತಿಗಳಲ್ಲಿ ಅತ್ಯಂತ ಎಚ್ಚರಿಕೆಯಿಂದ ನಡೆಯುವುದನ್ನು ಪತ್ರಿಕೋದ್ಯಮಿಗಳು ಕಲಿಸುತ್ತಾರೆ ಎಂದು ಚಂದ್ರೇಗೌಡರು ಅಭಿಪ್ರಾಯಪಟ್ಟರು.

ಮಠಗಳು ವೈದ್ಯಕೀಯ ಅಥವಾ ಎಂಜಿನಿಯರಿಂಗ್ ಕಾಲೇಜುಗಳನ್ನು ಪ್ರಾರಂಭಿಸುವುದು ಸಹಜ. ಆದರೆ ಪತ್ರಿಕೋದ್ಯಮದಂಥ ವಿಶಿಷ್ಟ ವಿಷಯಕ್ಕೆ ಸಂಬಂಧಿಸಿ ಅಧ್ಯಯನ ಕೇಂದ್ರ ಸ್ಥಾಪಿಸುತ್ತಿರುವುದು ಆದಿಚುಂಚನಗಿರಿ ಮಠದ ಪ್ರಶಂಸನೀಯ ಕಾರ್ಯವಾಗಿದೆ ಎಂದು ತರಳಬಾಳು ಮಠದ ಡಾ. ಶಿವಮೂರ್ತಿ ಶಿವಾಚಾರ್ಯ ಸ್ವಾಮೀಜಿ ತಿಳಿಸಿದರು.

ಜ್ಞಾನವು ಗ್ರಾಮೀಣ ಪ್ರದೇಶದವರಿಗೂ ಎಟಕುವಂತಿರ ಬೇಕೆಂಬ ಸದುದ್ದೇಶದಿಂದ ಈ ಸಂಸ್ಥೆಯನ್ನು ಪ್ರಾರಂಭಿಸುತ್ತಿರುವುದಾಗಿ ಬಾಲಗಂಗಾಧರನಾಥ ಸ್ವಾಮೀಜಿ ಅವರು ಸ್ಪಷ್ಟಪಡಿಸಿದರು.

ಅಂದಿನ ಕಾರ್ಯಕ್ರಮದಲ್ಲಿ ಲೋಕಸಭಾ ಸದಸ್ಯ ಎಂ. ವಿ. ಚಂದ್ರಶೇಖರ ಮೂರ್ತಿ ಅಧ್ಯಕ್ಷತೆ ವಹಿಸಿದ್ದರು. ಶಾಸಕ ಆರ್. ಅಶೋಕ್, ಓಂಕಾರೇಶ್ವರ ಮಠದ ಶಿವರುರಿ ಸ್ವಾಮೀಜಿ ಉಪಸ್ಥಿತರಿದ್ದರು. ಮಾಜಿ ಕುಲಪತಿ ಡಾ. ಕಾಂತಾ ಸ್ವಾಗತಿಸಿದರು.

---

# ವಿದ್ಯಾವಂತ ನಿರುದ್ಯೋಗಿಗಳಿಗೆ ಮಾರ್ಗದರ್ಶನ ಕೈಪಿಡಿ



ತಡಿಯಪ್ಪನ ಕುಮಾರ ಜಯ

ಇಂದು ನಮ್ಮ ಜನಾಂಗ ಕೆಲವು ವಿಷಯಗಳಲ್ಲಿ ಬಹಳ ಹಿಂದುಳಿಯ ಬೇಕಾದರೆ ನಮ್ಮ ಆರ್ಥಿಕ ಪರಿಸ್ಥಿತಿಯೇ ಒಂದು ದೊಡ್ಡ ಕಾರಣವಾಗಿದೆ ಎಂದು ಹೇಳಬಹುದು. ಇಂದು ನಮ್ಮ ಅರೆಭಾಷೆ ಗೌಡ ಜನಾಂಗ ವಿದ್ಯೆಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದರೂ ಆ ವಿದ್ಯೆಗೆ ತಕ್ಕ ಪ್ರತಿಫಲ ವಿಲ್ಲದೆ ಅಲೆದಾಡುವ ನಮ್ಮ ಹಲವಾರು ಯುವಕರು ಯಾವ ಹಾದಿಯಲ್ಲಿ ಮುಂದುವರಿಯಬೇಕೆಂಬ ಅರಿವಿಲ್ಲದೆ ತಾನು ಕಲಿತ ವಿದ್ಯೆಯ ಮಾರ್ಗ ಬದಲಾಗಿ ಜೀವನಕ್ಕೆ ಕನಿಷ್ಟ ದಾರಿಯನ್ನು ಆರಿಸಿ ಕೊಳ್ಳುತ್ತಿರುವುದು ನಮ್ಮ ಕಣ್ಣ ಮುಂದೆ ಹಲವಾರು ಉದಾಹರಣೆಗಳೊಂದಿಗೆ ಕಾಣುತ್ತಿವೆ. ಇದಕ್ಕೆ ಜನಸಂಖ್ಯಾಸ್ಪೋಟ ಒಂದು ಕಾರಣವಾದರೆ ಅದಕ್ಕನುಗುಣವಾಗಿ ನಮ್ಮ ಸರ್ಕಾರದಲ್ಲಿ ಕೆಲಸ ಲಭ್ಯವಿಲ್ಲದಿರುವಾಗ ನಮ್ಮ ಯುವ ಪ್ರತಿಭೆಗಳು ತಮ್ಮದೇ ಆದ ಹಲವು ಹಣ ಸಂಪಾದಿಸುವ ಸ್ವಯಂ ಉದ್ಯೋಗವನ್ನು ಸೃಷ್ಟಿಸಿ ಕೊಳ್ಳಬೇಕು. ಇಂದು ಜಪಾನ್, ಚೀನಾ, ಕೊರಿಯಾದಂತಹ ರಾಷ್ಟ್ರಗಳು ಮುಂದುವರಿಯಲು ಇಂತಹ ಸ್ವಯಂ ಉದ್ಯೋಗಗಳೇ ಕಾರಣವಾಗಿದೆ. ಆ ನಿಟ್ಟಿನಲ್ಲಿ ನಮ್ಮ ವಿದ್ಯಾವಂತ ಯುವಕ ಯುವತಿಯರು ಪ್ರಯೋಜನ ಪಡೆಯಲೆಂದೆ ಶ್ರೀ ತಡಿಯಪ್ಪನ ಕುಮಾರ ಜಯನವರು ನಿರುದ್ಯೋಗಿಗಳಿಗೆ ಮೈಸೂರಿನಲ್ಲಿ ಲಭ್ಯವಿರುವ ಮಾರ್ಗದರ್ಶಿ ಕೈಪಿಡಿಯನ್ನು ನೀಡಿರುತ್ತಾರೆ. ಇದರ ಸದುಪಯೋಗವನ್ನು ಸರ್ವರು ಪಡೆಯುವಂತೆ ಸಂಗಾತಿ ಬಯಸುತ್ತದೆ. ಶ್ರೀ ತಡಿಯಪ್ಪನ ಕುಮಾರ ಜಯನವರು ಮೈಸೂರಿನಲ್ಲಿ ಕೊಡಗು ಗೌಡ ಸಾಂಸ್ಕೃತಿಕ ಸಮಿತಿ ಮತ್ತು ಕೊಡಗು ಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘದ ಅಧ್ಯಕ್ಷರಾಗಿ ತಮ್ಮನ್ನು ಹಲವಾರು ಜನಪರ ಸಮಾಜ ಕೆಲಸಗಳಲ್ಲಿ ತೊಡಗಿಸಿ ಕೊಂಡಿ ರುವರು ಅಲ್ಲದೇ ಸಂಗಾತಿಯ ಬರಹಗಾರರು ಹೌದು.

**ಸಂಪಾದಕಿ**

**ಕರ್ನಾಟಕದಲ್ಲಿ ಲಭ್ಯವಾಗುವ ಸರ್ಕಾರಿ, ಅರೆಸರ್ಕಾರಿ, ಸ್ವದ್ಯೋಗ ಕಾರ್ಯಕ್ರಮಗಳ ಕಿರು ಪರಿಚಯ**

**೧. ಸರ್ಕಾರಿ ಉದ್ಯೋಗಗಳು**

ಕರ್ನಾಟಕ ಸರ್ಕಾರದ ವಿವಿಧ ಇಲಾಖೆಗಳಲ್ಲಿನ ಹುದ್ದೆಗಳ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗ, ನೇಮಕಾತಿ ಸಮಿತಿಗಳ ಮೂಲಕ ಲಿಖಿತ ಪರೀಕ್ಷೆ ಅಥವಾ ಸಂದರ್ಶನದ ಮೂಲಕ ನೇಮಕಾತಿ ಮಾಡಿಕೊಳ್ಳಲಾಗುತ್ತದೆ. ಲೋಕಸೇವಾ ಆಯೋಗದ ನೇಮಕಾತಿ ಬಗ್ಗೆ ರಾಜ್ಯಮಟ್ಟದ ಪತ್ರಿಕೆಗಳಲ್ಲಿ ಜಾಹೀರಾತು ನೀಡಲಾಗುವುದು.

*ವಿವರಗಳಿಗೆ ಸಂಪರ್ಕಿಸಿ :*

1. ಕರ್ನಾಟಕ ಲೋಕಸೇವಾ ಆಯೋಗ, ಸುದರ್ಶನ ಅತಿಥಿಗೃಹ, ಪಾರ್ಕ್ ಹೌಸ್ ರಸ್ತೆ, ಬೆಂಗಳೂರು -560 001.
2. ಕರ್ನಾಟಕ ಲೋಕ ಸೇವಾ ಆಯೋಗ, ನ್ಯೂ ಕಾಂತರಾಜೇ ಅರಸ್ ರಸ್ತೆ, ಸರಸ್ವತಿಪುರಂ, ಮೈಸೂರು - 570 009.

II ವಿವಿಧ ಸರ್ಕಾರಿ, ಅರೆಸರ್ಕಾರಿ, ಖಾಸಗಿ ಸಂಸ್ಥೆಗಳು ತಮ್ಮಲ್ಲಿರುವ ಹಲವು ಉದ್ಯೋಗಗಳನ್ನು ಸ್ಥಳೀಯ ಉದ್ಯೋಗ ವಿನಿಮಯ ಕೇಂದ್ರದ ಮೂಲಕ ಭರ್ತಿಮಾಡುವರು.

*ವಿವರಗಳಿಗೆ ಸಂಪರ್ಕಿಸಿ :*

ಜಿಲ್ಲಾ ಉದ್ಯೋಗಾಧಿಕಾರಿಗಳು,
ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ ಶಿವಾಜಿ ರಸ್ತೆ, ಎನ್. ಆರ್. ಮೊಹಲ್ಲಾ, ಮೈಸೂರು.

III ಕೇಂದ್ರ ಸರ್ಕಾರದ ಮೂಲಕ ಲಭ್ಯವಾಗುವ ಹುದ್ದೆಗಳನ್ನು ಸ್ಥಳೀಯ ದಿನ ಪತ್ರಿಕೆ ಮೂಲಕ ಜಾಹೀರಾತು ನೀಡಿ ಆಯ್ಕೆ ವಿಧಾನವನ್ನೂ ಸಹ ಪ್ರಕಟಪಡಿಸಲಾಗುವುದು. ಅಲ್ಲದೇ ಭೂ ಸೇನೆ, ವಾಯುಸೇನೆ ಮತ್ತು ಜಲ ಸೇನೆಯಲ್ಲಿ ವಿವಿಧ ದರ್ಜೆಯ ಹುದ್ದೆಗಳಿಗೆ ನೇಮಕಾತಿಯನ್ನು ಕೇಂದ್ರೀಯ ಲೋಕಸೇವಾ ಆಯೋಗದವರು ಲಿಖಿತ ಪರೀಕ್ಷೆ ಇಲ್ಲವೇ ಸಂದರ್ಶನದ ಮೂಲಕ ಆಯ್ಕೆ ಮಾಡುವರು. ವಿವರಗಳನ್ನು ಪತ್ರಿಕೆಗಳಲ್ಲಿ ಹಾಗೂ Employment News ಹಾಗೂ ರೋಜ್‌ಗಾರ್ ಸಮಾಚಾರ್ ಪತ್ರಿಕೆಗಳಲ್ಲಿ ಪ್ರಕಟಿಸಲಾಗುವುದು. ಆಯ್ಕೆಯನ್ನು ಸ್ಟಾಫ್ ಸೆಲೆಕ್ಷನ್ ಕಮಿಟಿ ಮೂಲಕ ನಡೆಯಲಾಗುವುದು

**ವಿವರಗಳಿಗೆ ಸಂಪರ್ಕಿಸಿ :**

1. Additional Director General of Recruiting, Army, West Block III, R.K. Puram, New Delhi.
2. Directorate of Man Power, Planning & Recruitment, Naval Head Quarters. New Delhi
3. Staff Selection Committee, New Delhi
4. Air Force Selection Board, C.V. Complex, Bannur Road, Mysore - 570 011.

IV ಶೀಘ್ರಲಿಪಿಗಾರರು, ಬೆರಳಚ್ಚುಗಾರರು, 'ಡಿ' ವರ್ಗದ ನೌಕರರು, ಹಾಗೂ ಇತರೆ ಕೆಲವು ವರ್ಗದ ಹುದ್ದೆಗಳನ್ನು ಇಲಾಖಾ ನೇಮಕಾತಿ ಸಮಿತಿಗಳ ಮೂಲಕ ನೇಮಕ ಮಾಡಲಾಗುವುದು. ಸಂಬಂಧಪಟ್ಟ ಪ್ರಕಟಣೆಯನ್ನು ಕರ್ನಾಟಕ ರಾಜ್ಯ ಪತ್ರದ ಭಾಗ VIII, ಇಲ್ಲವೇ ವಿಭಾಗೀಯ ಮಟ್ಟದ ಭಾಗ IXರಲ್ಲಿ ಪ್ರಕಟಪಡಿಸಲಾಗುವುದು.

V. ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡದ ವರ್ಗಕ್ಕೆ ಸೇರಿದವರಿಗೆ ಸ್ವಯಂ ಉದ್ಯೋಗ ಯೋಜನೆ ಅಡಿಯಲ್ಲಿ ಹಣಕಾಸು ಸಂಸ್ಥೆಗಳ ಸಹಯೋಗದೊಡನೆ ಸಾಲ ಸೌಲಭ್ಯ ನೀಡಲಾಗುವುದು. ರು. 5.00ಲಕ್ಷದವರೆಗೆ ಶೇ. 7ರಂತೆ ಹಾಗೂ ಮೇಲ್ಪಟ್ಟ ಸಾಲಕ್ಕೆ ಶೇ 9ರಂತೆ ಬಡ್ಡಿ ವಿಧಿಸಲಾಗುವುದು. ಕುಟುಂಬದ ವಾರ್ಷಿಕ ಆದಾಯ ರೂ. 31,952.00ನ್ನು ಮೀರಿರಬಾರದು.

**ವಿವರಗಳಿಗೆ ಸಂಪರ್ಕಿಸಿ:**

ಜಿಲ್ಲಾ ವ್ಯವಸ್ಥಾಪಕರು ಪರಿಶಿಷ್ಠ ಜಾತಿ/ಪರಿಶಿಷ್ಠ ವರ್ಗಗಳ ಅಭಿವೃದ್ಧಿ ನಿಗಮ ನಂ. 290/1, 1ನೇ ಮೇನ್ ರೋಡ್, ಲಕ್ಷ್ಮೀಪುರಂ. ಮೈಸೂರು -570 001.

VI. ಹಿಂದುಳಿದ ವರ್ಗಗಳು ಮತ್ತು ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದ ವತಿಯಿಂದ 1. ಚೈತನ್ಯ ಸಾಲದ ಯೋಜನೆ, ಸಂಯುಕ್ತ ಸಾಲದ ಯೋಜನೆ 3.ಚೈತನ್ಯ ಸಬ್ಸಿಡಿ ಕಂ ಸಾಫ್ಟ್ ಲೋನ್ ಯೋಜನೆ, ರಾಷ್ಟ್ರೀಯ ಹಿಂದುಳಿದ ವರ್ಗಗಳ ಹಣಕಾಸು ಮತ್ತು ಅಭಿವೃದ್ಧಿ ನಿಗಮದ ವತಿಯಿಂದ 1.ಮಾರ್ಜಿನ ಹಣಸಾಲದ ಯೋಜನೆ 2. ಅವಧಿ ಸಾಲದ ಯೋಜನೆ 3. ಸಹಕಾರ ಸಂಘಗಳ ಮೂಲಕ ಸಾಲ ನೀಡಿಕೆ, ವೃತ್ತಿ ತರಬೇತಿ ಯೋಜನೆ ಅಡಿಯಲ್ಲಿ 3ರಿಂದ 6ತಿಂಗಳವರೆಗೆ ತರಬೇತಿ ನೀಡಲಾಗುವುದು. ತರಬೇತಿ ಅವಧಿಯಲ್ಲಿ ತಿಂಗಳಿಗೆ ರೂ.400/- ರಂತೆ ಶಿಷ್ಯ ವೇತನ ಸಹ ನೀಡಲಾಗುವುದು. ಅಲ್ಲದೆ ಡಿಪ್ಲೋಮಾ, ಪೋಸ್ಟ್ ಡಿಪ್ಲೋಮಾ ಇನ್ ಪೋರ್ ಮನ್‌ಶಿಪ್ ತರಬೇತಿ ಹಾಗೂ ವಾಹನಚಾಲನ ತರಬೇತಿ, ಶಿಲ್ಪಕಲಾ ತರಬೇತಿ ಹಾಗೂ ನೇಕಾರಿಕಾ ತರಬೇತಿ ಸಹ ನೀಡಲಾಗುವುದು. ಅರ್ಜಿಗಳನ್ನು ಪ್ರತಿ ವರ್ಷ ಮೇ-ಜೂನ್ ತಿಂಗಳಲ್ಲಿ ಕರೆಯಲಾಗುವುದು.

**ವಿವರಗಳಿಗೆ ಸಂಪರ್ಕಿಸಿ:-**

ಜಿಲ್ಲಾ ಅಧಿಕಾರಿಗಳು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಜಿಲ್ಲಾಧಿಕಾರಿಗಳ ಕಛೇರಿ ಕಟ್ಟಡ, ಮೈಸೂರು -570 005.

*(ಮುಂದಿನ ಸಂಚಿಕೆಯಲ್ಲಿ ಮುಂದುವರಿಯುವುದು)*

## ಕಥೆ : ಮೈಸೂರುಗೆ ಬಂದೊಳೋ ಎಚ್ಚರ

ನಮ್ಮ ಮನೆ ಹಕ್ಕಲೆ ಸುಮಾರು42 ಪ್ರಾಯದ ಈರಮ್ಮ ಒಂದ್ ಹೆಂಗಸು. ಇದ್ ನಮ್ಮ ತಾತನ ಹಕ್ಕಲೆ ಕೆಲಸಕ್ಕೆ ಇತ್. ಇವಳು ತಾತನಂತರ ಕೆಲ್ಸ ಇಲ್ಲದಿರಕ್ಕನ ಹೊರಗಡೆ ಕೆಲ್ಸಕ್ಕೆ ಹೋಗುತ್ತಿತ್. ಈಗ ಬೇರೆ ಕೊಡುಗಿಗೆ ಶುಂಠಿಯವು ಬೇರೆ ಬಂದೊಳೋ. ಅವರೊಟ್ಟಿಗೆ ಸೇರಿ ಕೆಲ್ಸ ಮಾಡ್ತಿತ್. ಎಲ್ಲವೂ ಗ್ಯಾನ ಮಾಡ್ದೊ ಇವಳ ಹಕ್ಕಲೆ ತುಂಬ ದುಡ್ಡು ಉಟ್ಟುಂತ ಇವಳು ಸಿಕ್ಕಿದ ದುಡ್ಡುಲ್ಲಿ ಕುರಿ ತಲೆ, ಕುರಿ ಕಾಲು ಎಲ್ಲ ತಂದ್ ತಿನ್ನುತ್ತಿತ್ತು. ಒಟ್ಟಿಗೆ ಒಂದು ನಾಯಿನು ಬೇರೆ ಸಾಕಿಟ್ಟು. ಅದಕ್ಕೆ 'ಟೈಗರ್'ಅಂತಹ ಹೆಸರು ಬೇರೆ ಇಟ್ಟುಟ್ಟು. ಅದಕ್ಕೆ ದಿನಲೂ ಮೊಟ್ಟೆ ಹಾಲು ಮಾಂಸ ಬೇರೆ ತಂದು ಕೊಡುತ್ತಿತ್ತು. ನಾಯಿನೂ ಕೂಡ ತುಂಬಾ ಹುಷಾರು ಉಟ್ಟು. ನಾಯಿನು ದಪ್ಪವಾಗಿ ಫಾರಿನ್ ನಾಯಿನ ನೋಡ್‌ದಂಗೆ ಉಟ್ಟು. ಇವಳ ಹತ್ತರ ದುಡ್ಡು ಉಟ್ಟುತ ಜನ ಹೇಳಿಕೆ ಸುರುಮಾಡುದೋ. ಇವಳ ಹತ್ತರ ಮೈಸೂರು ಬ್ಯಾಂಕ್‌ದ್ ಪಾಸ್ ಬುಕ್ ಬೇರೆ ಇತ್. ನಮ್ಮ ಈ ಕಡೆ ಮನೆ ರಾಮಣ್ಣ ಭಾವ ಇವಳ ದುಡ್ಡುನ ಹೊಡಿಯಕ್ಕೆ ಉಪಾಯ ಮಾಡ್ತ್. ಈರಮ್ಮನ ಕೇಳ್ತ್. ನಿನ್ನ ಹಕ್ಕಲೆ ಎಷ್ಟ್ ದುಡ್ಡ್ ಉಟ್ಟ್‌ತ ಕೇಳ್ತ್. ಆಗ ಈರಮ್ಮ ಹೇಳ್ತ್ ನನ್ನ ಹಕ್ಕಲೆ 25 ಸಾವಿರ ರೂಪಾಯಿ ಉಟ್ಟ್‌ತ ಹೇಳತ್. ಆಗಾ ರಾಮಣ್ಣ ಭಾವ ಇರಮ್ಮ ನಂಗೆ ಹತ್ತು ಸಾವಿರ ಸಾಲ ಕೊಟ್ಟೆಯತ ಕೇಳ್ತ್ ಅವಳು ಹೇಳ್ತ್ ಅದ್ ಇಲ್ಲಿ ಇಲ್ಲೆ ತ ಮೈಸೂರು ಬ್ಯಾಂಕ್‌ಲ್ಲಿ ಉಟ್ಟುತ ಇವಳ ಪಾಸ್ ಬುಕ್‌ಲಿ ಬರಿ 25ರೂಪಾಯಿ. ಇವಳು ಎಂತಹ ಮಾಡ್ ಇರ್ರು ಗೊತ್ತುಟ್ಟಾ? 25ರ ಹತ್ತರ ಎರ್ಡ್ ಸೊನ್ನೆ ಹಾಕಿತ್ ಆಗಾ 25 ಸಾವಿರ ಆತ್. ರಾಮಣ್ಣ ಭಾವಂಗೆ ಪಾಸ್ ಬುಕ್ ತೋರಿಸಿತ್ ರಾಮಣ್ಣ ಭಾವಂಗೆ ಭಾರೀ ಖುಷಿ ಆತ್. ರಾಮಣ್ಣ ಭಾವಂಗೆ ಬೇರೆ ಮೈಸೂರಿಗೆ ಹೋಕೆ ದುಡ್ಡು ಬೇರೆ ಇಲ್ಲೆ. ಎಂತಹ ಮಾಡ್ದೊ ಗ್ಯಾನ ಮಾಡ್ತ್. ಕಡೆ ಮನೆ ಕುರ್ಇಪ್ಪ ಮಾವನ ಕೈಯಿಂದ ಸಾವಿರ ರೂ ಸಾಲ ತಕ್ಕಂಡ್ ಈರಮ್ಮನ ಕರ್ಕಂಡ್ ಮೈಸೂರಿಗೆ ಬೆಳಿಗ್ಗೆ ಹೊರಟತ್. ಹುಣಸೂರುಗೆ ಹೋಗಿ ಬೆಳಿಗ್ಗೆ ಕಾಫಿ ತಿಂಡಿ ತಿಂದ್ ಪುನಃ ಹೊರಟೋ ಮೈಸೂರಿಗೆ. ರಾಮಣ್ಣ ಭಾವನೆ ಬಸ್‌ಗೆ ಎಲ್ಲಾ ಟಿಕೆಟ್ ಮಾಡ್ತ್. ಮೈಸೂರಿಗೆ ಬಸ್ ಸ್ಟ್ಯಾಂಡ್‌ಲ್ಲಿ ಇಳ್‌ದ್ ರಿಕ್ಷಾ ಮಾಡಿಕಂಡ್ ಬ್ಯಾಂಕ್ ಹತ್ತರ ಹೋದವೆ. ಅಲ್ಲಿ ಹೋಗಿ ಪಾಸ್ ಬುಕ್ ಕೊಟ್ಟವೆ. ರಾಮಣ್ಣ ಭಾವ ಈರಮ್ಮಂಗೆ ಹೇಳತ್ 25 ಸಾವಿರನೂ ತೆಗೆದ್ ಬುಡೋನ ಪುನಃ ಪುನಃ ಮೈಸೂರಿಗೆ ಯಾರ್ ಬಾದು ಈರಮ್ಮ. ಹುಂ ಅಂತ್ ಹೇಳತ್ ಪಾಸ್ ಬುಕ್ ಕೊಡ್ ಕಾಕನ ಬ್ಯಾಂಕನವ ಸುಮಾರು ಹೊತ್ತ್ ಬುಕ್ ತಿರಿಗಿಸಿ ನೋಡತ್ ನೋಡಿ ಬುಟ್ಟು ಈ ಪಾಸ್ ಬುಕ್‌ಲ್ಲಿ 25ರೂ. ಮಾತ್ರ ದುಡ್ಡು ಇರ್ರು. ಆಗ ಬ್ಯಾಂಕನವ ಹೇಳತ್ ಇಲ್ಲಿಂದ ಬೇಗ ಜಾಗ ಕಾಲಿ ಮಾಡದ್‌ರೆ ಬಚಾವು ಇಲ್ಲರೆ ದೊಡ್ಡಮನೆಗೆ ಹೋಕಂತ್ ಹೇಳ್ತ್. ರಾಮಣ್ಣ ಭಾವಗೆ ಶಾಖ ಹೊಡ್‌ದಂಗೆ ರಾಮಣ್ಣ ಭಾವ ಏನ್ ಮಾತಾಡದೆ ಬ್ಯಾಂಕ್‌ಂದ ಹೊರಗೆ ಬಂದ್ ಈರಮ್ಮ ನೀನು ಇಲ್ಲಿ ನಿತ್ತ್‌ಕ ನಾನು ರಿಕ್ಷಾ ತಗಂಡ್ ಬನ್ನೆ ಹೇಳಿ ಸೀದ ಕೊಡುಗಿಗೆ ಬಂದ್ ಬುಟ್ಟತ್. ಈಗ ಈರಮ್ಮ ಮೈಸೂರ್‌ಲ್ಲಿ ಉಟ್ಟು. ಇಲ್ಲಿ ತಾತನೂ ಮತ್ತೆ ಅವಳ ನಾಯಿನು ಪಾರ ಕಾಯುತ್ತಾ ಒಳೊ ದಯವಿಟ್ಟು ಸಿಕ್ಕಿದವ್ರೆ ಕಳುಹಿಸಿ ಕೊಡಿ ಆತಾ . ರಾಮಣ್ಣ ಭಾವಗೆ 1000 ರೂ. ಸಾಲ ಆವುಟು.

ಮೇರಕಜೆ ರೋಹಿತ್, ಮುತ್ತಾಮುಡಿ.

**ಅಂಗೈ ಹುಣ್ಣಿಗೆ ಕನ್ನಡಿ ಯಾಕೆ?**

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

ಧಾರಾವಾಹಿ -10

ಹಿಂದೆ ನಡದದ್.......

ಪೋಲಿಸರ ಮತ್ತೆ ಜನರ ಕಣ್ಣಂದ್ ತಪಿಸಿಕಂಬಕೆ ರಾಜು ದಿನಕೊಂದ್ ವೇಷನ ಹಾಕಂಡ್ ದಿನಕೊಂದ್ ಊರ್‌ಲಿ ತಿರ್ಗಿಕ್ಕಾದೆ. ಬಾರೀ ದೊಡ್ಡ ಪೈಲ್ವಾನ್‌ಗೆ ಸವಾಲ್ ಹಾಕಿ ಅವನ ಸೋಲಿಸಿ 25000 ಸಾವಿರ ಬಹುಮಾನ ಪಡೆದಿದ್ದದೆ. ಹಂಗಾಗಿ ಇವನ ಹೊಗಳಿ ದೊಡ್ಡ ಸೈಜನ ಫೋಟೋ ಪೇಪರ್‌ಲಿ ಬಂದಿದ್ದವೆ. ಇಂವ ನಂಜನಗೂಡು ರಸ್ತೆಲಿ ಹೋಕಾಕನ ಕಬಿನಿ ಹೊಳೆಗೆ ಹಾರಿ ಪ್ರಾಣಕಳಕಂಬತಿದ್ದ ಗೂಡೆನ ಪ್ರಾಣನ ಉಳ್ಸಿದೆ. ಅವಳನ್ನ ಮದುವೆ ಆನೆತ ಪ್ರಾಮಿಷ್ ಮಾಡಿ ಅಲ್ಲಿಂದ ಹೊರಟದೆ.

ಮುಂದಕೆ...........

Mr.ರಾಜು "ಕಬಿನಿ" ಹೊಳೆ ಹರಿದ್ ಹೋದಂಗೆ ತನ್ನ ಯೋಚನಾ ಲಹರಿನ ಹರಿಯಕೆ ಬುಟ್ಟ್‌ಕಂಡ್ ಹಂಗೆ ಹೊಳೆ ಕರೇಲಿ ನಡಿತಾ ಇತ್ತ್. ಥೂ! ಎಂಥಾ ಒಂದ್ ಮುದ್ದಾದ ಹೂವು ಅದ್ ತನ್ನ ಚೆಲವುಲಿ ಅರಳಿ, ತನ್ನ ಸುಗಂಧದ ಪ್ರಭಾವನ ಪ್ರಕೃತಿಯೊಳಗೆ ಬೀರಿ ತನ್ನ ಯೌವ್ವನದ ನೂರಾರ್ ಆಸೆಗಳ ಕನಸ್‌ನ ಕಂಡ್‌ಕಂಡ್ ಕುಷಿ ಪಟ್ಟ್ ನಲಿಯುವಂತಹ ಈ ಸಮಯಲಿ ಆ ಹೆಣ್ಣ್ ಗೂಡೆನ ಕೇವಲ ಒಂದ್ ಕಾಲ್ ಅಂಗ ಊನಾಗುಟ್ಟುತ್ತೇಳುವ ಅಲ್ಪ ನ್ಯೂನತೆನೇ ಅವಳ ಪಾಲಿಗೆ ಅದೃಷ್ಟ ಹೀನ ಆಗಿ ಹೋಗುಟಲ್ಲಾ? ಇಷ್ಟ್ ಸಣ್ಣ ಕಾರಣಕ್ಕೆ ಆ ಗೂಡೆ ಅವಳ ಪ್ರಾಣನೇ ಬಲಿಕೊಟ್ಟುಕೊಂಬಂತಹ ಕಠಿಣ ತೀರ್ಮಾನಕ್ಕೆ ಕೈ ಹಾಕಿತಲ್ಲಾ? ಆ ಗೂಡೆಗೆ ಎಂಥಾ ಧೈರ್ಯ ಇರ್ದು? ಅದ್ರೇ ಅದೇ ಧೈರ್ಯಕ್ಕೆ ಒಳ್ಳೆ ಪ್ರೇರಣೆ ಮಾರ್ಗದರ್ಶನ ಸಿಕ್ಕಿದಿದ್ರೆ? ಆಗ ಅವಳ ಭವಿಷ್ಯನೇ ಒಳ್ಳೆದಾರಿಗೆ ತಿರುಗಿಕ್ಕಿತ್ತ್‌ಲ್ಲಾ? ಇಂತಹ ಗೂಡೆನ ಖಂಡಿತವಾಗಿಯೂ ನಾನ್ ಮೆಚ್ಚಿನೆ. ಇಂತವಳು ನಂಗೇ ತಕ್ಕವಳು. ಒಂದ್ ಕುಂಟಿಗೂಡೆನ ಬಾಳಿಗೆ ಆಶ್ರಯ ಕೊಡುವ ಅವಕಾಶ ನಂಗೆ ಸಿಕ್ಕಿಟ್ಟು. ಆ ಗೂಡೆನ ಅಂದ, ಚಂದ, ಮೈಬಣ್ಣ ಕೂಡಾ ಎಷ್ಟೊಂದು ಪೊರ್ಲ್ ಉಟ್ಟು ಪುನಃ ಪುನಃ ಅವಳ ಮುಖನ ನೋಡಿಕೆ ಆಶೆ ಆಗುವಂತಹ ಮುದ್ದಾದ ಮುಖ ಲಕ್ಷಣ ಇರುವ ಗೂಡೆದ್ ಒಂದ್ ಕಾಲ್ ಕುಂಟಾಗಿಹೋದ್ರೆ? ಅವಳು ಕುರೂಪಿನಾ? ಅವಳ ಕೋಮಲವಾದ ಹೃದಯ, ಅಥವಾ ಅವಳ ಮೃದು ಬಾವನೆಗೆ ಬೇಕಾಗಿಲ್ಲೆ, ಮೈ ಮುಚ್ಚುಷ್ಟ್ ಹಣನ ಸೊರ್ದ್ರೆ ಆಗ ಮಾತ್ರ ಇಂತ ಹೆಣ್ಣ್ ಗೂಡೆಗಳ ಇಲ್ಲಿನ ಜನ ಮದ್ವೆ ಆಕೆ ರೆಡಿ ಆಗುವೊ. ಇವು ಯಾರೂ ಸರಿ ಇಲ್ಲೆ. ನಾನೇ ಈಗ ಅವಳ ಪ್ರಾಣನ ಉಳ್ಸಿದಂವ. ಅವಳ ಬಾಳಿಗೂ ನಾನೇ ಆಶ್ರಯ ಕೊಟ್ಟನೆ ಅಂತ ತೀರ್ಮಾನ ಮಾಡಿಕಂಡ್ ಅಷ್ಟೊತ್ತಿಗೆ ಅಲ್ಲೇ ಎಡಬದಿ ಹೊಳೆ ಕೆರೆಲಿ ಒಬ್ಬ ಸನ್ಯಾಸಿ ಅವನ ಬಟ್ಟೆಗಳನೆಲ್ಲಾ ಅವನ ಜೋಳಿಗೆ ಒಳಗೆ ತುಂಬುತಿತ್. ಅರ್ರೆವಿ ಅಂವ ಅವನ ತಲೆನ ಕೂಡಾ ಕಳಚಿ ಈ ಜೋಳಿಗೆ ಒಳಗೆ ತುಂಬಿತ್. ನೆರೆಗೂದಲು ಗಡ್ಡ, ಮೀಸೆಗ, ಕಮಂಡಲ, ರುದ್ರಾಕ್ಷಿ ಮಾಲೆ ಎಲ್ಲಾ ಜೋಳಿಗೆ ಒಳಗೆ ಸೇರ್ಸಿದ ಮೇಲೆ ಮೆಲ್ಲಂಗೆ ಹೊಳೆ ಮದ್ಯಕ್ಕೆ ಇಳ್ತ್. ಎದೆ ಮಟ್ಟದ ನೀರೊಳಗೆ ನಿಂತ್ ಕಂಡ್ ಒಂದ್ ಮುಳಕ ಹಾಕ್ತ್. ಆಮೇಲೆ ಮೈಕೈನ ಉಜ್ಜಿಕಂಬಕೆ ಸುರು ಮಾಡ್ತ್. ಇನ್ನೊಂದ್ ಮುಳಕ ಹಾಕಿಕಾಕನ ಅವನ ಜೋಳಿಗೆ ಸಮೇತ Mr. ರಾಜು ನಾಪತ್ತೆ ಆತ್, ಆ ಸನ್ಯಾಸಿ ಅನುಮಾನ ಬಂದ್ ಈ ಮನ್ಸನ ಕಡೆ ನೋಡ್ತ್. ಇಂವ ಅಲ್ಲಿ ಇಲ್ಲೆ. ಅವನ ಜೋಳಿಗೆ ಮತ್ತೆ ಎಲ್ಲಾ ಸಾಮಾನುಗ ಕೂಡಾ ಮಾಯ ಆಗಿತ್ತ್ ಅಲ್ಲಿಂದ ಎದ್ದ್ ಬರೀ ಒಂದ್ ಕೋಮಣೆ ಬಟ್ಟೆಲಿ (ಕಚ್ಚೆ) ಕರೆಗೆ ಓಡಿಬಾತ್. ಪಾಪ ಈಗ ಆ ಸನ್ಯಾಸಿದ್ ತಲೆನೂ ಬೋಳು ಮೈಗೆ ಬಟ್ಟೆನೂ ಇಲ್ಲೆ ಆಗ ಅಂವಂಗೆ ಸಿಟ್ಟ್ ಬಂದ್ ಕಿರ್‌ಚಾಡಿಕಂಡ್, ಓಡಾಡಿಕಂಡ್, ಅಲ್ಲೇ ಸುತ್ತಮುತ್ತ ಗಿಡ ಪೊದೆಗಳ ಸುತ್ತಾ ಹುಡುಕಾಡ್‌ತಿತ್.

ಕಬ್ಬುನ ಗದ್ದೆ ಒಳಗೆ ನುಗ್ಗಿ ½ ಕಿಲೋ ಮೈಲ್ ದಾಟಿಕಾಕನ ಈ Mr. ರಾಜುನ ವೇಷ ಭೂಷಣಗ ಚೇಂಜ್ ಆಗಿ ಹೋಗಿ ಈಗ ಪಕ್ಕಾ ಒಬ್ಬ ಕಾವಿದಾರಿ ಸನ್ಯಾಸಿ ಆಗಿ ಮಾರ್ಪಟಿತ್. ಆ ತೇಜ ಪುಂಜವಾದ ಮುಖದಲ್ಲಿ ಉದ್ದವಾದ ಬಿಳಿ ಗಡ್ಡ ಮೀಸೆಗ, ಹಣೆ ಪೂರ್ತಾ ವಿಭೂತಿ ನಾಮ ಎಳಕಂಡ್, ಮದ್ಯಲಿ ಒಂದ್ ಅಗಲವಾದ ಕೆಂಪು ಕುಂಕುಮ ಬೊಟ್ಟ್‌ನ ಹಾಕಿಕಂಡಿತ್. ಕುತ್ತಿಗೆಲಿ ರುದ್ರಾಕ್ಷಿ ಹಾರ, ಕೈಲಿ ದಂಡಕಮಂಡಲಗ, ಪಾದಕ್ಕೆ ಮರದ ಕಡಾವು, ಕಾವಿ ಹೊದಿಕೆ ಒಳಗೆ ಒಂದ್ ದೊಡ್ಡ ಜೋಳಿಗೆನ ನೇತಾಡಿಸಿಕಂಡ್ ಅಲ್ಲೇ ಪಕ್ಕದ ಒಂದ್ ತೋಟದೊಳಗಿಂದ 4-5 ಅರಳಿದ ಗುಲಾಬಿ ಹೂವುಗಳ ಕಿತ್ತ್‌ಕಂಡ್ ಒಳಗೆ ಹಾಕಿಕಂಡತ್. ಅಲ್ಲದೆ ಆ ಜೋಳಿಗೆ ಒಳಗೆ ಇನ್ನೂ ಏನೇನೋ ತರಹದ ಸಾಮಾನುಗಳ ಪೊಟ್ಟಣಗಳಿದ್ದೊ. ಹಳದಿ, ನವಸಾಗರ, ಕ್ಯಾಲ್ಸಿಯಂ, ಕರ್ಪೂರ ಬಿಲ್ಲೆಗ, ಕುಂಕುಮ ಬಸ್ಮ ಹಿಂಗೆಲ್ಲಾ ಇತ್. ಇದರೆಲ್ಲಾ ಒಂದ್ ಸರ್ತಿ ಚೆಕಪ್ ಮಾಡಿಕಂಡ್ ನೋಡ್ತ್ ಆಮೇಲೆ ಬಸ್‌ಗ ಓಡಾಡುವ ಮೆಯಿನ್ ರಸ್ತೆಗೆ ಬಂದ್ ಸೇರ್ತ್. ಆಗ ಗುಂಡ್ಲು ಪೇಟೆ ಕಡೇಂದ ಕಾಫಿ ಬೀಜ ಚೀಲಗಳ ತುಂಬ್ಸಿಕಂಡ್ ಬರ್ತಿದ್ದ ಒಂದ್ ಲಾರಿಗೆ ಕೈ ಅಡ್ಡ ತೋರ್ಸಿತ್. ಲಾರಿ ಪಕ್ಕಲಿ ಬ್ರೇಕ್ ಹೊಡ್ದ್ ನಿಂತಾಕನ ಈ ಸನ್ಯಾಸಿ ಲಾರಿ ಕ್ಯಾಬಿನ್ ಒಳಗೆ ಹತ್ತಿ ಕುದ್ದತ್. ಡ್ರೈವರ್ ಪಕ್ಕದಲ್ಲಿ ಕುದ್ದವನೇ ಈ ಲಾರಿ ಸಾಹುಕಾರನ ಮಂಜತ್ತೇಳಿ ತಿಳ್ಕಂಡತ್ ಕೂಡ್ಲೆ ದೈವಾನುಭೂತ ಕಾವಿಧಾರಿ

ಓಂ ಶ್ರೀ ಚಾಮುಂಡೇಶ್ವರೀ ನಮೋ ನಮೋ ಹರಿಜಾಕ್ಷಣೀ ತಾಯೀ ಈ ಬಾಲಕನಿಗೆ ಮಂಗಳವಾಗಲೀ ಮಹಾತಾಯೀ ಚಾಮುಂಡೇಶ್ವರೀ ಥತಾಸ್ತ್ ತಾ ಜೋರಾಗಿ ಉಸರ್ ಎಳ್ದ್ ಹೇಳಿ ಆ ಬಾಲಕನ ತಲೆ ನೆತ್ತಿ ಮೇಲೆಂದ ಕೆನ್ನೆವರೆಗೆ ಒಂದ್ ತರಹದ ದ್ರವ ತೆಗ್ದ್ ಸವರಿತ್ ಆಗ ಆ ಹೈದ ನರಿವಿಷದ, ಮೊದ್ದಿಗೆ ಮಂಕಾಗುವ ಸರ್ಪದಂಗೆ ಮೆತ್ತಂಗೆ ಆಗಿ ಹೋತ್. ಕೂಡ್ಲೆ ಈ ಸನ್ಯಾಸಿ ಕಣ್ಣ್ ಮುಚ್ಚಿಕಂಡ್ ಒಂದ್ ಕೈಲಿ ಗಡ್ಡನ ಸವರಿಕಂಡ್ ಆ ಮಹಾ ತಾಯಿನ ನೆನಸಿಕಂಡ್ ಆ ಹೈದನ ಅಂಗೈನ

ಕಳ್ಳನನ್ನೂ ನಂಬಿದರೂ ಕುಳ್ಳನನ್ನು ನಂಬಬಾರದು

ಬೊಗಸೆ ಹಂಗೆ ಹಿಡ್ಸಿ ಬರೀ ಕೈಯಿಂದಲೇ ಒಂದ್ ತಾಜಾ ಗುಲಾಬಿ ಹೂವುನ ಬೀಳಿಸಿತ್. "ಇದು ನೋಡು ಬಾಲಕಾ ಶ್ರೀ ಚಾಮುಂಡಿ ತಾಯಿಯ ಪ್ರಸಾದ" ನಿನಗೆ ಅನುಗ್ರಹವಾಗಿದೆ. ಸ್ವೀಕರಿಸು ತಾ ಹೇಳ್ತ್. ಆ ಹೈದ ಆಶ್ಚರ್ಯ ಪಟ್ಟಕಂಡ್ ಈ ಘಮ ಘಮ ತ್ತೇಳುವ ಗುಲಾಬಿ ಹೂವುನ ಹಿಡ್‌ಕಂಡ್ ಕಣ್ಣಿಗೆ ಒತ್ತಿಕಂಡ್ ಭಯ ಭಕ್ತಿಂದ ತನ್ನ ಜೋಬೊಳಗೆ ಹಾಕಿಕಂಡತ್, ಈಗ ಬಲೆಗ ಬೀತ್ ಈ ಕುರಿತಾ ಮನ್ಸ್‌ಲೇ ಹೇಳಿಕಂಡ್ ಈ ಸನ್ಯಾಸಿ ತನ್ನ ಕಣ್ಣ್‌ಗಳ ಅಗಲವಾಗಿ ಹೊರಡಿಸಿಕಂಡ್ ಮೂಗು ಹೊಳ್ಳೆಗಳ ದೊಡ್ಡದಾಗಿ ಅರಳಿಸಿಕಂಡ್ ಮೈಮೇಲೆ ಒಳ್ಳೆ ಆವೇಶ ಬಂದವನಂಗೆ ಬುಸ್ಸ್ ಗುಟ್ಟಕಂಡ್ ಓಂ. ಭ್ರೀಂ.. ಭ್ರೂ.. ವರಂ. ಹೇ ಮಹಾಕಾಳೀ.. ಶ್ರೀ ಚಾಮುಂಡೇಶ್ವರೀ ತಾ ಹೇಳಿ ಕಂಡ್ ಅವನ ಮುಖಕ್ಕೆ ತನ್ನ ಮುಷ್ಟಿಂದ ನಿವಾಳಿಸಿದ ಮೇಲೆ ಅಂಗೈನ ಜೋಡ್ಸಿ ಹಿಡಿಯಕೆ ಹೇಳ್ತ್. ಆಗ ಆ ಡ್ರೈವರ್ ಮತ್ತೆ ಕ್ಲೀನರ್‌ಗ ಈ ಪವಾಡ ಪುರುಷನ ಆಶ್ಚರ್ಯಲಿ ನೋಡ್ತಾ ಇದ್ದೊ. ಲಾರಿ ನಿಧಾನಕ್ಕೆ ಹೋಗ್ತಾ ಇತ್. ಆ ಹೈದನ ಅಂಗೈ ಒಳಗೆ ಗಮ ಗಮತ್ತೇಳುವ ಭಸ್ಮದ ಪುಡಿಗ ಉದುರಿದೋ. ಇದರ ನೋಡಿ ಎಲ್ಲವುಕು ಬಹಳ ಆಶ್ಚರ್ಯ ಆಗಿ ಹೋತ್. ಈ ಸನ್ಯಾಸಿ ಬಹಳ ದೊಡ್ಡ ಪವಾಡ ಪುರುಷ ಮಹಾತ್ಮನೇ ಆಗಿರೊಕ್ಕುತ್ತೇಳಿ ನಂಬಿಕಂಡೊ. ಈ ಹೈದ ಆ ಭಸ್ಮನ ಒಂದ್ ಪೇಪರ್ ಪೀಸ್ ಒಳಗೆ ಹಾಕಿ ಮಡುಚಿ ಜೇಬು ಒಳಗೆ ಸೇರಿ ಕಂಡತ್.

ಬಾಲಕಾ ನಿನ್ನ ಮ್ಯಾಲೆ ಆ ತಾಯಿಯ ಅನುಗ್ರ ಆಗಿದೆ ನಿನ್ನ ನಾಮನಕ್ಷತ್ರ ಪೂರ್ವಷಾಡವಲ್ಲವೇ? ನಾಳೆ ದಿನವೇ ತುಂಬು ಪೌರ್ಣಿಮೆ ಇದೆ. ಶ್ರಾವಣ ಶನಿವಾರದ ಒಳ್ಳೆ ಘಳಿಗೆಗೆ ನಿನ್ನ ಶನಿಗ್ರಹ ಬಾಧೆ ಕಳೆದು ಒಂದು ಪಕ್ಷ ಕಳ್ದ್ ಹೋಗುಟ್ಟು. ನಿಂಗೆ ಶುಕ್ರನ ದೆಸೆ ಒಂದನೇ ಮನೆಲಿ ಕುದ್ದುಟ್ಟು. ನಿನ್ನ ಕುಂಡಲಿನ ಯೋಗಲಿ ಈಗ ನೀನ್ ಮುಟ್ಟಿದೆಲ್ಲಾ ಚಿನ್ನ ಆಗಿ ಹೋದೆ. ನೀನ್ ಒಂದು ವರ್ಷ ಕಾಲದಿಂದಲೂ ಬಹಳ ಪ್ರಯತ್ನ ಮಾಡ್‌ತಿದ್ದ ರಾಜ್ ಕಾರ್ಯ ಒಂದರಲ್ಲಿ ಈಗ ನಿಂಗೆ ಜಯ ಸಿಕ್ಕಿದೆ. ಬಾಲಕಾ ನೀನ್ ಅಚಾನಕ್ ಆಗಿ ಇನ್ನೊಂದು ಹೊಸದಾದ ಈ ತರದ ರಥದ ಒಡೆಯ ಆಗುವ ಕಾಲ ಬಂದುಟ್ಟು, ಹಾಂ! ಹೆಂಗೆ ಗೊತ್ತುಟ್ಟಾ? ನಿನ್ನ ರಾಶಿ ಫಲಲಿ ಆ ಐಶ್ವರ್ಯ ಲಕ್ಷ್ಮಿ ಒಲಿದು ಬಂದುಟ್ಟು. ಆದ್ರೇ.. ಆದ್ರೇ...ನೀನ್ ಇದೂವರೆಗೂ ಆಡದ ಆಟ ಇಲ್ಲೆ. ಮಾಡದ ಶ್ರಮ ಇಲ್ಲೆ. ಅಲ್ದೇ ಇನ್ನೊಂದ್ ವಿಚಾರ ನಿನ್ನ ಬೆನ್ನ್ ಹಿಂದೆ ನಿನ್ನ ಆಪ್ತ ಜನರೇ ಕತ್ತಿ ಮಸೆಯುತ್ತಾ ಒಳೋ. ಅವರಿಂದ ನಿಂಗೆ ಕೇಡ್ ಆದೆ. ಅವರಿಂದ ಸದಾ ನೀನ್ ಬಹಳ ಎಚ್ಚರಂದ ಇರೋಕು ಆತಾ? ನನ್ನ ಈ ದೇವಿ ಮೇಲೆ ಭರವಸೆ ಮಡುಗು ನಿನ್ನ ಎಲ್ಲಾ ಕಂಟಕಗ ನಿವಾರಣೆ ಆಗಿ ಹೋದೆ. ಈ ಮೊದಲು ಎರಡ್ ಭಾರಿ ನಿನ್ನ ಬಂದುಗಳ ನಂಬಿ ನೀನ್ ಮೋಸ ಹೋಗಿದ್ದೆ, ಅಲ್ವಾ ಬಾಲಕಾ? ಆದ್ರೇ ಈಗ ನೀನ್ ಹೊಸ ರಥನ ಖರೀದಿಸಲಿರುವೆ. ನಿನ್ನ ವ್ಯವಹಾರ 4 ಪಟ್ಟ್ ವೃದ್ಧಿ ಆದೆ ತಾ ಈ ಸನ್ಯಾಸಿ ಹೇಳುತನೇ ಇತ್ತ್. ಆ ಹೈದ ಇದರೆಲ್ಲಾ ಕೇಳಿ ಖುಷಿ ಆಗಿ ಹಿಗ್ಗಿಹೋಗಿತ್.

ಬಾಲಕಾ.. ನಿಂಗೆ ಎರಡ್ ಸರ್ತಿ ಲಾಟರಿಲಿ ಬರ್ತಿದ್ದ ಲಕ್ಷ್ಮಿ ಸ್ವಲ್ಪದರಲಿ ತೊಪ್ಪಿ ಹೋಗಿತ್. ಅದ್ರೂ ಪರ್ವಾಗಿಲ್ಲೆ ನೀನ್ ಧೈರ್ಯಲಿ ಇರ್. ನನ್ನ ದೇವಿಯು ಆಜ್ಞೆ ನಂಗೆ ಹೇಳ್ತಾ ಉಟ್ಟು. ಈ ದಿನ ನೀನ್ ಮೈಸೂರಿನ ಬನುಮಯ್ಯ ಸರ್ಕಲ್‌ಗೆ ಹೋಗು ಅಲ್ಲಿ ಗಣಪತಿ ದೇವರ ಗುಡಿಮುಂದೆ ಇರುವ ಒಂದ್ ಲಾಟರಿ ಅಂಗಡಿಂದ ಒಟ್ಟಿಗೆ 10 ಟಿಕೇಟ್‌ನ ಖರೀದಿ ಮಾಡಿಕ. ಇದರಲ್ಲಿ ಒಂದರಲ್ಲಿ 5 ಲಕ್ಷ ರೂಪಾಯಿ ಲಕ್ಷ್ಮಿ ನಿಂಗೆ ಒಲಿವಂಗೆ ನನ್ನ ದೇವಿ ಆಶೀರ್ವಾದ ಉಟ್ಟು, ಹಾಂ! ತಾಳು ಬಾಲಕಾ ಸಮಧಾನಿಸು ತಾ ಹೇಳಿ ಜೋಳಿಗೆ ಒಳಗೆ ಕೈಹಾಕಿ ಆಮೇಲೆ ಆ ಬಾಲಕನ ತಲೆ ಮೇಲೆ ಆಶೀರ್ವಾದ ಮಾಡಿಕಂಡ್ ಆ ಬಾಲಕನ ಅಂಗೈ ಮೇಲೆ ತನ್ನ ಹೆಬ್ಬೆರ್‌ಳ್‌ನ ಎಡ್ಡ ಕೈಯಿಂದ ಹಿಡ್ದ್ ಹಿಂಡಿತ್. ಆಗ ಸನ್ಯಾಸಿನ ಹೆಬ್ಬೆರ್‌ಳ್‌ದ ಗಮುಗಮ ತ್ತೇಳುವ ತೀರ್ಥದ ನೀರ್ ತೊಟತೊಟಾತ ಕೆಲವು ನೀರ್ ಹನಿಗ ಇವನ ಹಣೆ ಮೇಲೂ ಮೂಗ್‌ನ ಮೇಲೆ ಬೀತ್. ಆಗ ಅಂವ ನಾಲಿಗೆನ ಚಾಚಿತ್ ತೀರ್ಥ ಇವನ ನಾಲಿಗೆ ಮೇಲೆ ಬಿದ್ದದರ ನೆಕ್ಕಿಕಂಡತ್. ಈಗ ಸನ್ಯಾಸಿಗೆ ಬಹಳ ಖುಷಿ ಆಗಿಹೋತ್. ಬಾಲಕಾ ನಿನ್ನ ಆಸೆ ಕೈಗೂಡ್ತ್. ಜೋಳಿಗೆ ಒಳಗಿಂದ ಶ್ರೀ ಚಾಮುಂಡೇಶ್ವರಿ ದೇವಿಯ ಫೋಟೋನ ಹೊರಗೆ ತೆಗ್ದ್ ಬಾಲಕನ ಮುಂದೆ ಹಿಡ್ತ್. ಬಾಲಕಾ ಈ ತಾಯಿಗೆ 1000 ರೂಪಾಯಿ ದಕ್ಷಿಣೆ ಇಟ್ಟು ನಮಸ್ಕರಿಸು". ಬಾಲಕಾ ಹೂಂ ಬೇಗ ಬೇಗ ಆಶೀರ್ವಾದನ ಪಡ್ಕ್. ತೆಗೆ ಹಣ ತೆಗೆ ಬೇಗ ... ನಿನ್ನ ದಕ್ಷಿಣೆ ಆ ತಾಯಿಗೆ ತಲಪಕ್ಕು, ನನ್ನ ತಾಯಿ ಸಿಟ್ಟಾಗಬಾರದು. ದೇವಿ ಸಿಟ್ಟಾದ್ರೇ ನೀನ್ ಸುಟ್ಟು ಬೂದಿ ಆಗಿ ಹೋದಿಯ. ಬೇಗ ತಾಯಿ ಚಾಮುಂಡಿದ್ ಅನುಗ್ರಹ ಆಗ್ತಾ ಉಟ್ಟು, ಆಗ್ತಾ ಉಟ್ಟು ತಾ ಹೇಳ್ತಾ ಅವಸರ ಮಾಡಿಕಂಡ್ ಈ ಸನ್ಯಾಸಿ ಪುನಃ ಆವೇಶ ಬಂದವನಂಗೆ ಆತ್. ಎರಡ್ ಕಣ್ಣ್‌ಗಳ ಕೆಂಪಿಗೆ ಊದಿಸಿಕಂಡ್ ಬುಸ್ಸುಗುಟ್ಟಿಕಂಡ್ ಕೈನ ಮುಷ್ಠಿ ಹಿಡ್ದ್ ಬಾಲಕನ ತಲೆಸುತ್ತಾ ಒಂದ್ ಸರ್ತಿ ತಂದ್, ಮುಷ್ಠಿನೂ, ಶ್ವಾಸನೂ ತನ್ನ ಕಡೆಗೆ ಎಳ್ಕೊಳ್ಳುತಾ ಮಾಡಿಕಾಕನ ಈ ಬಾಲಕನ ತಲೆ ಜುಮ್ ತ್ತೇಳಿ ಒಮ್ಮೆಗೆ ಗಿರ್ರನೆ ಚಕ್ಕರ್ ಹೊಡ್ದ್ ಸ್ವಾದೀನ ಕಳಕಂಡ್ ಕುದ್ದಲ್ಲೇ ಒಂದ್ ಸೈಡಿಗೆ ವಾಲಿತ್

ಇದರೆಲ್ಲಾ ನೋಡ್ತಾ ಇದ್ದ ಲಾರಿ ಡ್ರೈವರ್‌ಗೆ ಗಾಬರಿ ಆಗಿ, ಬ್ರೇಕ್ ಹೊಡ್ದ್ ಲಾರಿನ ಪಕ್ಕಕ್ಕೆ ತಿರುಗಿಸಿ ನಿಲ್ಸಿತ್. ಈ ಕಡೆ ಕುದ್ದಿದ ಕ್ಲೀನರ್ ಈ ಸನ್ಯಾಸಿ ಏನ್ ಮಾಡ್ತಾ ಉಟ್ಟ್‌ತಾ ನೋಡಿ ಕಂಡ್ ಸಿಟ್ಟ್ ಬಂದ್ ಅಂಬಟೆ ಕಚ್ಚುತಾ ನೋಡ್ತಿತ್. ಡ್ರೈವರ್ ಭಯ ಭಕ್ತಿಲಿ ಅಮ್ಮಾತಾಯಿ ಕೋಪ ಮಾಡಿಕಣದೆ ನನ್ನ ಸಾಹುಕಾರನ ಮಂಜನ ಕಾಪಾಡಕು ತ್ತೇಳಿ ಬೇಡಿಕಂಡತ್. ಆಗ ಈ ಬಾಲಕ ನಿಧಾನಕ್ಕೆ ಅವನ ಪ್ಯಾಂಟ್‌ನ ಒಳ ಜೋಬುಂದ 100ರ ಹತ್ತ್ ನೋಟುಗಳ್ನ ತೆಗ್ದ್ ಸನ್ಯಾಸಿ ಹಿಡ್ದಿದ್ದ ಆ ದೇವಿ ಫೋಟೋದ ಮೇಲೆ ಮೊಡಗಿ ನಮಸ್ಕರಿಸಿತ್. "ಮಿಸ್ಟರ್ ರಾಜು ಸನ್ಯಾಸಿ" ಆಶೀರ್ವಾದ ಮಾಡಿಕಂಡೇ ತಾಯಿ ಚಾಮುಂಡಮ್ಮನ ಅನುಗ್ರಹ ನಿನ್ನ ಮೇಲೆ ಉಟ್ಟುತಾ ಹೇಳಿಕಂಡ್ ಅದೇ ಜಾಗಲಿ ಆ ಲಾರಿ ಕ್ಯಾಬಿನ್ ಒಳಗಡೆಂದ ಎದ್ದ್ ಹಾರಿ ಹೊರಗೆ ಇಳ್ತ್.

ಲಾರಿ ಪುನಃ ಸ್ಟಾರ್ಟ್ ಮಾಡಿಕಂಡ್ ಮೈಸೂರು ಸಿಟಿಕಡೆಗೆ ಹೊರಟತ್. ಈ ಸನ್ಯಾಸಿ ವೇಷಲಿ ರಾಜು ಒಂದು ಸಾವಿರ

ಮಾಡುವವನ ಪಾಪ ಆಡುವವನ ಬಾಯಲ್ಲಿ

ರೂಪಾಯಿನ ಸಂಪಾದಿಸಿಕಂಡ್ ಹಂಗೇ ಗನ್ ಹೌಸ್ ಮುಂಭಾಗ ದಿಂದ ಮೈಸೂರು ಮುನ್ಸಿಪಾಲಿಟಿ ಕಟ್ಟಡದ ಕಡೆಗೆ ಕಾಲ್ ಹಾಕಂಡ್ ಹೊರಟತ್. ತುಂಬಾ ಹೊತ್ತ್ ಹಂಗೆ ನಡ್ದ್ ಕಾವೇರಿ ಆರ್ಟ್ ಗ್ಯಾಲರಿ ಕಟ್ಟಡದ ಹಿಂಭಾಗದ ರಸ್ತೆಗೆ ಬಾತ್. ಅಲ್ಲಿ ಅತ್ತ ಇತ್ತ ಕತ್ತ್‌ನ ತಿರುಗಿಸಿಕಂಡ್ ನಡಿಯಕಾಕನ ಅಲ್ಲೇ ಬಲಗಡೆಲಿ ಹಿಂದೂಸ್ತಾನ್ ಟೈಲರ್ಸ್ ತ್ತೇಳುವ ಬೋರ್ಡ್‌ನ ಕಂಡತ್.

ಈ ಖಾಕಿ ಬಟ್ಟೆನ ಕಂಡ ರಾಜುಗೆ ತಾನ್ ತೊಟ್ಟಿದ ಕಾವಿ ಬಟ್ಟೆನ ಕಳಚಿ ಹಾಕಿರೆ ಮುಂದಕೆ ಒಳ್ಳೆದಾದು ತ್ತೇಳುವ ಐಡಿಯ ತಲೆಗೆ ಹೊಳ್ತ್. ಯಾಕೆತ್ತೇಳಿರೆ ಈ ಖಾಕಿ ಬಟ್ಟೆಲಿ ಎಂಥ ಕೆಲ್ಸ ಮಾಡಿರೂ ಅಪಾಯ, ಭಯ, ಕಡಿಮೆ. ಅದೂ ಅಲ್ಲದೆ ಈ ಖಾಕಿ ಬಟ್ಟೆಗೆ ಸ್ವಲ್ಪ ಮರ್ಯಾದಿನೂ ಹೆಚ್ಚ್. ಇದರ ದರ್ಪದಿಂದ ಕಾಸ್‌ನ ಕೂಡಾ ಸಂಪಾದಿಸಕ್ಕ್‌ತಾ ಗ್ಯಾನ ಮಾಡಿ ಕಂಡ್ ಆ ಟೈಲರ್ ಅಂಗಡಿ ಒಳಗೆ ನುಗ್ಗಿತ್. ಆಗ ಈ ಕಾವಿದಾರಿ ಗಿರಾಕಿನ ನೋಡ್ದ ಸಾಹುಕಾರ ವೆಂಕೋಜಿರಾವ್ ಆಶ್ಚರ್ಯಲಿ ಕಿಸಕ್ಕನೆ ನೆಗಾಡಿ ಏನು ಬೇಕಾಗಿತ್ತು ಸ್ವಾಮಿಗಳಿಗೆತ ಕೇಳ್ತ್. ಒಂದು ಫುಲ್‌ಸೆಟ್ಟ್ ದಫೇದಾರರ ಯೂನಿಪಾರಂನ ಪ್ಯಾಕ್ ಮಾಡಿ, ಹಾಂ ಹಂಗೆನೆ ಹ್ಯಾಟ್ ಬೆಲ್ಟ್, ಷೂವ್, ಸ್ಟಾರ್ಸ್ ಎಲ್ಲಾ ಒಟ್ಟಿಗೆ ಪ್ಯಾಕ್ ಮಾಡಿ ಬುಡಿ. ಈ ಕಾವಿಬಟ್ಟೆನ ಹಾಕಿ ಹಾಕಿ ನಂಗೆ ಬೋರ್ ಹಿಡ್ದೋಗಿದೆ. ಅದ್ಕೆ ಸ್ವಲ್ಪ ದಿನ ಈ ಖಾಕಿ ಡ್ರೆಸಲ್ಲಿ ಮರ್ಯಾದೆಲಿ ತಿರುಗಾಡಬಹುದಲ್ಲವೇ? ತಾ ಹೇಳಿಕಾಕನ ಆ ಸಾಹುಕಾರ ಒಂದು ಸೆಟ್ಟ್ ದಫೇದಾರ್ ಯೂನಿಫಾರ್ಂ ಪ್ಯಾಕ್ ಮಾಡಿ ಕೊಟ್ಟೊ. ಒಟ್ಟು ಬಿಲ್ ಬರೇ 800 ರೂ ಅಷ್ಟೆತ್ತೇಳ್ದೊ. ರಾಜು ಆ ಬಿಲ್‌ನ ಹಣನ ಕೊಟ್ಟ್ ಕುಷೀಲಿ ಆ ಯೂನಿಪಾರಂ ಸೆಟ್ಟನ ತನ್ನ ಜೋಳಿಗೆ ಒಳಗೆ ತುರುಕಿ ಮಡಗಿಕಂಡತ್.

ಇವತ್ತಿಗೆ ಸಾಕ್ ಈ ಕಾವಿ ಬಟ್ಟೆಯ ಸನ್ಯಾಸಿ ವೇಷ ನಾಳೆಯಿಂದ ನಾನೊಬ್ಬ ಪೋಲಿಸ್ ಕಾನ್ಸ್‌ಟೇಬಲ್ ಆಗಿ ಹೋನೆತ ಗ್ಯಾನಮಾಡಿಕಂಡ್ ಹಂಗೇ ಆ ಗಲ್ಲಿಂದ ಕೆಳಗಡೆ ಗಲ್ಲಿಗೆ ತಿರುಗಿಕಂಡ್ ನಡ್ತ್. ಅಲ್ಲಿಂದ ಸ್ವಲ್ಪ ಕೆಳಗೆ ಹೋಗಿ ಆಕನ ಒಂದ್ ಅಡ್ಡರಸ್ತೆ ಸಿಕ್ತ್. ಅದರಲ್ಲಿ ಒಂದ್‌ಕಡೆ ಉಮಾ ಟಾಕೀಸ್ ಚಿತ್ರಮಂದಿರ, ಒಂದ್ ಕಡೆ ದೊಡ್ಡ ಬಾರ್ ಅಂಡ್ ರೆಸ್ಟೋರೆಂಟ್ ಅಲಂಕಾರ್ ಬಾರ್ ತ್ತೇಳುವ ಹೆಸರಿತ್ತ್. ಇನ್ನೂ ಈ ಕಡೆಗೆ ನಾಲ್ಕ್ ಅಂತಸ್ತ್‌ನ ಜನತಾ ಲಾಡ್ಜ್. ಅದಕ್ಕಿಂತ ಸ್ವಲ್ಪ ಕೆಳಗಡೆ ಸ್ವಲ್ಪ ಮೌನ ವಾತಾವರಣದ ಜೈನ್ ಲಾಡ್ಜ್ ಇತ್ತ್. ಇದರೆಲ್ಲಾ ನೋಡಿದ ರಾಜುಗೆ ಇಲ್ಲೇ ಎಲ್ಲಾದರೊಂದು ನನ್ನ ಖಾಯಂ ವಾಸಸ್ಥಾನನ ಮಾಡಿಕಂಬೋಕಲ್ಲಾ? ತ್ತೇಳುವ ಆಲೋಚನೆ ಹೊಳ್ತ್. ರಾತ್ರಿ ಆದ್ರೆ ಒಂದ್ ಕಡೆ ನಿದ್ದೆ ಮಾಡಿಕೆ ಮಲಗಿ ಕೊಂಬೊಕಲ್ಲಾ? ಬೆಳಿಗೆ ಎದ್ದರೆ ದಿನಕ್ಕೊಂದು ವೇಷನ ಹಾಕಂಡ್ ಹೊರಟ್, ದಿನಕ್ಕೊಂದು ತರದ ಕೆಲ್ಸ ಮಾಡಿರೆ ಆತ್. ಆದ್ರೇ ನನ್ನಂತಹ ಕಿಲಾಡಿಗ ಜನರ ಕಣ್ಣ್‌ಂದ ಸ್ವಲ್ಪ ಮರೆ ಆಗಿಯೇ ಇರೋಕು. ಅದ್ರುಂದ ಹೆಚ್ಚಿಗೆ ಜನ ಓಡಾಡದ ಈ ಜೈನ್ ಲಾಡ್ಜೆ ನಂಗೆ ಸರಿತಾ ಲೆಕ್ಕ ಹಾಕಿತ್.

ಈ ಜೈನ್ ಲಾಡ್ಜಿಗೆ ಹೆಸರಿಗೆ ತಕ್ಕಂಗೆ ಹೆಚ್ಚಾಗಿ ಮಾರ್ವಾಡಿಗ ಸೇಟ್ ಜಾತಿಗಳಂತ ಜನನೇ ಆ ಲಾಡ್ಜಿಗೆ ಹೆಚ್ಚಾಗಿ ಬರುತಿದ್ದೊ ಎಲ್ಲಾ ರಾಜಸ್ಥಾನ್, ಉತ್ತರ ಪ್ರದೇಶ ಕಡೆಯ ಜನ. ಅಲ್ಲಿ ಹೆಚ್ಚಿಗೆ ಗಲಾಟೆ ಇಲ್ಲೆ. ಜನರ ಓಡಾಟನೂ ಕಡಿಮೆ. ಸರಿ ಈ ಕಾವಿದಾರಿ ಸನ್ಯಾಸಿ ಜೈನ್ ಲಾಡ್ಜ್ ರಿಸಿಪ್ಶನ್ ಕೌಂಟರಿಗೆ ಹೊಕ್ಕತ್.

ಸೇಟ್‌ಜೀ ಮೇರೆಕೋ ಏಕ್ ಮೈನೆ ಕೆ ಲಿಯೆ ಸಿಂಗಲ್ ಕಾಟ್ ಬೆಡ್‌ರೂಂ ಚಾಯಿಯೆತಾಕೇಳ್ತ್. ಆಗ ಅಲ್ಲಿದ್ದ ಲಾಡ್ಜ್ ಮೇನಜರ್ ಈ ಸನ್ಯಾಸಿ ರಾಜುನ ಅಡ್ರಸ್‌ನ ಕೇಳಿ ತನ್ನ ಡೈಲಿ ವಿಸಿಟರ್ಸ್ ಲೆಡ್ಜರಿಲಿ ಬರ್ಕಂಡತ್. ಆಗ Mr.ರಾಜು ಅವುಕೆ ರಾಮ ಕಿಷನ್ ಸ್ವಾಮಿಜೀ, ದಕ್ಷಿಣ ಕಾಶಿ ತಲಕಾವೇರಿ, ಭಾಗಮಂಡಲ. ತೇಳಿ ಅಡ್ರಸ್ಸ್‌ನ ಕೊಡ್ತ್.

ಸ್ವಾಮಿ ರಾಮಕಿಷನ್‌ಜೀ ಅದಾ ಮೈನೆಕಾ ಅಡ್ವಾನ್ಸ್ ಅಬೀ ಪಾಂಚ್ ಸೌ ದೇನಾ ಬಾಕಿಕಾ ಬಾದ್‌ಮೆ ದಿಯೋತೋ ಬಸ್ ತ್ತೇಳಿ ಅಡ್ವಾನ್ಸ್ ರಶೀದಿನ ಮುಂದೆ ಮಡಗಿತ್. ಹಂಗೇ ವಿಸಿಟರ್ಸ್ ಲೆಡ್ಜರಿಗೆ ಈ ಸ್ವಾಮಿನ ಸಿಗ್ನೇಚರ್ ಮಾಡಿಸ್‌ಕಂಡ್ ರೂಂ ಬಾಯಿನ ಕರ್ದ್ ಹೇಳ್ತ್. ಎ ಬೋರೋನಾಥ್ ಯೇ ಸ್ವಾಮಿಜೀಕೋ ಯೇ ಬಾಜೂಕಾ ಸಿಂಗಲ್ ಬೆಡ್ ರೂಂ ಸ್ವಚ್‌ಕರ್‌ಕೆ ದೇನಾ ಯೇ ಸ್ವಾಮೀಜೀಕೋ ಬುಲಾಕೆ ಜಾವೋ ತಾ ಹೇಳ್ತ್. ಆ ಮೂರು ಕಡೆ ಸಾಲಾಗಿ ಕಟ್ಟಿದ ಮೂರು ಮಹಡಿ ಎತ್ತರದ ವಿಶಾಲವಾದ ಈ ಲಾಡ್ಜ್‌ನ ಒಳಗಡೆ ವಿಶಾಲವಾದ ಪಾರ್ಕಿಂಗ್ ಜಾಗಲಿ, ಹೂವು ಗಿಡಗಳ ಸಣ್ಣ ಪಾರ್ಕ್ ಅದರ ಮಧ್ಯಲಿ ಒಂದ್ ಸಣ್ಣ ನೀರ್‌ನ ಚಿಲುಮೆ ಸುತ್ತೆಲ್ಲಾ ಜನ ತಿರುಗಾಡಿಕೆ ಖಾಲಿ ಜಾಗ ಹಂಗೇ ಬೇಕಾದಷ್ಟ್ ವಾಹನಗ. ಕಾರ್‌ಗಳ ಪಾರ್ಕಿಂಗ್ ಜಾಗ ಇತ್ತ್. ಈ ಲಾಡ್ಜ್‌ನ ಗೇಟ್ ಒಳಗಡೆಗೆ ಸೇರಿ ಬುಟ್ಟರೆ ಮತ್ತೆ ಹೊರಗಡೆ ಜನರ ಯಾವುದೇ ಜಂಜಾಟಾಗಲಿ, ಕರ್ಕಸ ಸಬ್ದಗಾಗಲೀ ಇತ್‌ಲೆ. ಇದರ ಬಲಗಡೆಗೆ ಒಂದು ಮೂಲೆ ಕೊಟ್ಟ ಈ ಸಿಂಗಲ್ ಬೆಡ್ ರೂಂ. ಒಳ್ಳೆ ಲಾಯಕ್ಕಾದ ಬಂದೊ ಬಸ್ತ್‌ರೂಂ. ಅದರ ಒಳಗಡೆನೇ ಸ್ನಾನಕ್ಕೆ ಕಕ್ಕಸ್‌ಗೆ ವ್ಯವಸ್ತೆ ಇತ್, ಈ ರಾಜು ಸನ್ಯಾಸಿ ಕೋಂಬರೆ ಒಳಗೆ ಸೇರಿಕಂಡಂವ ಮೊದ್ಲ್ ತನ್ನ ಜೇಬು ಒಳಗೆ ಸ್ಟಾಕ್ ಇದ್ದ ರೂಪಾಯಿ ಕಂತೆಗಳನೆಲ್ಲಾ ಹೊರಗೆ ತೆಗ್ದ್ ಹಾಕಿತ್. ಆಮೇಲೆ ಅದನೆಲ್ಲಾ ಲೆಕ್ಕಹಾಕಿ ಮಡಚಿ ಒಂದ್ ಪ್ಲಾಸ್ಟಿಕ್ ಪೇಪ್‌ಲಿ ಸುತ್ತಿಕಟ್ಟಿತ್. ಒಟ್ಟು 22 ಸಾವಿರ ರೂಪಾಯಿ ಈ ಗಂಟ್‌ನ ಎಲ್ಲಿ ಮಡಗಿ ಕಂಬೋದುತಾ ಗ್ಯಾನ ಮಾಡಿ ಕೆಳಗೆ ಹಾಸಿದ ಹತ್ತಿ ಹಾಸಿಗೆಯ ತಲೆಗಡೆಗೆ ಒಂದ್ ಬ್ಲೇಡಂದ ಕೊಯ್ದು ಹರ್ತ್. ಅದರೊಳಗಿಂದ ಸ್ವಲ್ಪ ಹತ್ತಿನ ಹೊರಗೆ ತೆಗ್ದ್ ಆಜಾಗಲಿ ಈ ರೂಪಾಯಿಗಂಟ್‌ನ್ ಸೇರ್ಸಿ ಪುನಃ ಈ ಹತ್ತಿನ ಅದರೊಳಗೆ ತುಂಬಿ ಯಾರಿಗೂ ಗೊತ್ತಾಗದಂಗೆ ಜೋಪಾನ ಮಾಡ್ತ್.

ಆಮೇಲೆ ತನ್ನ ಕಾವಿ ಬಟ್ಟೆನೆಲ್ಲಾ ಬಿಚ್ಚಿ ಬಿಸಾಕಿ ತಣ್ಣೀರ್‌ಲಿ ಲಾಯಕ್‌ಲಿ ಸ್ನಾನಮಾಡಿಕಂಡ್ ಪ್ರೆಶ್ ಆಗಿ ಮಾಮೂಲಿ ಶರಟ್ ಪ್ಯಾಂಟ್‌ನ ಹಾಕಂಡ್ ಹೊರಗೆ ಹೊರಡಿಕಾಕನ ಗಂಟೆ 9 ಆಗಿತ್. ಹಂಗಾಗಿ ಅಲ್ಲೇ ಪಕ್ಕದ ಅಲಂಕಾರ್ ಬಾರ್ ಒಳಗೆ ಹೋಗಿ ಕುದ್ ಕಂಡತ್.

(ಮುಂದ್‌ವರ್ದದೆ)

ಶಂಕರನ ಬಸಪ್ಪ

---

ತಾನು ಕಳ್ಳ ಪರರ ನಂಬ

# ಗೌಡ ಜನಾಂಗದ ಮೇರು ವ್ಯಕ್ತಿತ್ವದೌನ್ನತ್ಯಗಳ ಸೀಮಾಪುರುಷ ಶ್ರೀ ಕುರುಂಜಿ ವೆಂಕಟ್ರಮಣ ಗೌಡ

"ಗಗನಂ ಗಗನಾಕಾರಂ ಸಾಗರಂ ಸಾಗರೋಪಮಂ" ಎಂಬ ಉಕ್ತಿಗೆ ಸೂಕ್ತರೆನಿಸಿರುವ ಶಿಕ್ಷಣ ರಂಗದ ಧೀಮಂತ ದಿಗ್ಗಜರೂ, ಧವಳ ಸದೃಶ ನಿಸ್ಪೃಹರೂ, ಅನುಪಮ ದಾನಿಗಳೂ ಮತ್ತು ಗೌಡ ಜನಾಂಗದ ಕಣ್ಮಣಿಯೂ ಆಗಿರುವ ಶ್ರೀ ಕುರುಂಜಿ ವೆಂಕಟರಮಣ ಗೌಡರ ಮೇರು ವ್ಯಕ್ತಿತ್ವವನ್ನು ಉತ್ತುಂಗಕ್ಕೇರಿದ ಶ್ರೇಷ್ಠರಿಗೆ ಹೋಲಿಸಿದಾಗ ಅಪೂರ್ಣತೆಯೇ ಕಾಡುವುದರಿಂದ ಅವರಿಗೆ ಅವರನ್ನೇ ಉಪಮೆಯಾಗಿ ತೆಗೆದುಕೊಳ್ಳುವುದು ವಿಶೇಷವೆನಿಸಿದೆ. "ಆಧುನಿಕ ಸುಳ್ಯದ ಅಮರ ಶಿಲ್ಪಿ", 'ಸುಳ್ಯದ ವರಪ್ರಸಾದ"ಕೊಡುಗೈ ದಾನಿ' ಇತ್ಯಾದಿ ಅರ್ಥಪೂರ್ಣ ಜನಮೆಚ್ಚುಗೆಯ ಅಭಿದಾನ ಮತ್ತು ಅನುಕೀರ್ತನೆಗೆ ಪಾತ್ರರಾಗಿ ನಾಡಿನ ಉದ್ದಗಲಕ್ಕೂ ಖ್ಯಾತರಾಗಿರುವ ಮಣ್ಣಿನ ಮಗ ಶಿಕ್ಷಣ ಲೋಕದ ಧ್ರುವತಾರೆ ಶ್ರೀ ಕುರುಂಜಿಯವರು ನಮ್ಮ ನಡುವೆ ಇರುವ ಒಂದು ಮಹಾನ್ ಚೇತನ, ಸ್ಫೂರ್ತಿಯ ಚಿಲುಮೆ, ಸರ್ವಗುಣಗಳ ಗಣಿ, ಆದರ್ಶಗಳ ಆಗರ, ದಣಿವರಿಯದ ದುಡಿಮೆಗಾರ ಮತ್ತು ಎದೆಗುಂದದ ಹೋರಾಟಗಾರ. ಅವರು ನಡೆದು ಬಂದಿರುವ ಹಾದಿ ಮತ್ತು ಸಾಧನೆಗಳನ್ನು ಅಧ್ಯಯನ ಮಾಡುವುದಾದರೆ ಅದೊಂದು ಚೇತೋಹಾರಿಯಾದ ವಿಷಯವಾಗಿದ್ದು ಒಂದು ಮಹಾಕಾವ್ಯದ ರಸಾಸ್ವಾದನದ ಆನಂದವನ್ನು ನೀಡುತ್ತದೆ.

**ರಾಜೀವಗಾಂಧಿ ರಾಷ್ಟ್ರೀಯ ಏಕತಾ ಪ್ರಶಸ್ತಿಗಳಿಸಿದವರೆಗೆ ಕ್ರಮಿಸಿದ ಹಾದಿಯ ಉದ್ದಗಲ:**

ವಸಂತ ಕಾಲದ ಆಗಮನವು ಪ್ರಕೃತಿಯಲ್ಲಿ ನವೋಲ್ಲಾಸವನ್ನು ಉಕ್ಕಿಸಿ ಫಲಪುಷ್ಪಗಳ ಸಮೃದ್ಧಿಯನ್ನು ನೀಡುವಂತೆ ಶ್ರೀ ಕುರುಂಜಿಯವರ ಹುಟ್ಟಿನೊಂದಿಗೆ ಸುಳ್ಯದ ಇತಿಹಾಸ ಬಾಂದಳದಲ್ಲಿ ಮಹಾನ್ ಅಂಕವೊಂದರ ಅಂಕುರವಾಯಿತೆನ್ನುವುದು ಜನಜನಿತ ಸಂಗತಿಯಾಗಿದೆ. ಶ್ರೀ ಕುರುಂಜಿ ಮಹಾಲಿಂಗ ಗೌಡರು ಮತ್ತು ಶ್ರೀಮತಿ ಲಕ್ಷ್ಮಿ ದಂಪತಿಗಳ ದ್ವಿತೀಯ ಪುತ್ರರಾಗಿ ದಿನಾಂಕ 26-12-1928ರಂದು ಕೊನರೊಡೆದ ಶ್ರೀ ಕುರುಂಜಿಯವರು ಇಂದು ಹೆಮ್ಮರವಾಗಿ ಬೆಳೆದು ನಿಂತಿದ್ದಾರೆ. ಅಂದಿನ ದಿನಗಳಲ್ಲಿ ಅವರ ಹುಟ್ಟು ಹಬ್ಬ ಮನೆಮಂದಿಗೆ ಮಾತ್ರ ಸೀಮಿತ ಹೊಂದಿದ್ದರೆ ಇಂದು ನಾಡಹಬ್ಬವಾಗಿ ಆಚರಣೆ ಗೊಳ್ಳುವಷ್ಟು ಅರ್ಥಪೂರ್ಣವಾಗಿದೆ. ಆರ್ಥಿಕವಾಗಿ ಅಷ್ಟೇನು ಸ್ಥಿತಿವಂತರಲ್ಲದ ಕುಟುಂಬದಲ್ಲಿ ಜನಿಸಿದ ಇವರು ಬಾಲ್ಯವನ್ನು ಕಷ್ಟಗಳ ಸರಮಾಲೆಯಲ್ಲಿಯೆ ಕಳೆಯಬೇಕಾಯಿತು. ಆದರೆ ಬೆಳೆಯುವ ಪೈರು ಮೊಳಕೆಯಲ್ಲಿಯೆ ಗುಣತೋರುವಂತೆ ಶಾಲೆಯಲ್ಲಿನ ಎಲ್ಲಾ ಚಟುವಟಿಕೆಗಳಲ್ಲಿ ಮುಂದಿದ್ದರೂ ಆರ್ಥಿಕ ಮುಗ್ಗಟ್ಟು ಮತ್ತು ತಂದೆಯವರ ದೇಹಾಂತದಿಂದಾಗಿ ಓದಿಗೆ ಪೂರ್ಣವಿರಾಮ ಬಿದ್ದಿತು. ಎಡೆಬಿಡದೆ ಬಂದ ಕಷ್ಟಗಳಿಗೆ ಜಗ್ಗದೆ ಛಲದಿಂದ ಎದುರಿಸಿದರು. ಆತ್ಮ ವಿಶ್ವಾಸದಿಂದ ಮುಂದಡಿಯಿಟ್ಟರು; ಅವಕಾಶಗಳಿಗಾಗಿ ಕಾಯದೆ ಅವುಗಳನ್ನು ಸೃಷ್ಟಿಸಿಕೊಂಡರು; ತೊಡರುಗಳಾಗಿ ಕಾಡಲು ಬಂದವುಗಳನ್ನು ಮುರಿದು ಮೆಟ್ಟಿಲಾಗಿರಿಸಿಕೊಂಡು ಮೇಲೇರಿದರು. ಪರಿಶ್ರಮ ಮತ್ತು ಪ್ರಾಮಾಣಿಕ ದುಡಿಮೆಯ ಮೂಲಕ ತಮ್ಮನ್ನು ತಾವೇ ರೂಪಿಸಿಕೊಂಡರು. ಯಾರೂ ಊಹಿಸದಿದ್ದ ಎತ್ತರಕ್ಕೇರಿದರು. ಶ್ರೀಮಂತಿಕೆ ಮತ್ತು ಹೃದಯ ಶ್ರೀಮಂತಿಕೆಗಳೆರಡನ್ನೂ ಸಮನಾಗಿ ಬೆಳೆಸಿಕೊಂಡರು ಮತ್ತು ತಾವು ನಿತ್ಯವೂ, ಹೋರಾಟದ ಕುಲುಮೆಯಲ್ಲಿ ಬೆಂದರೂ ಸಮಾಜಕ್ಕೆ ಮಾತ್ರ ಹೂವಾದರು. ಈಗಾಗಲೇ 71 ವಸಂತಗಳನ್ನು ಯಶಸ್ವಿಯಾಗಿ ಪೂರ್ಣಗೊಳಿಸಿರುವ ಶ್ರೀಯುತರು ಸಮಾಜದ ಬಲವರ್ಧನೆಗೆ ಪುಂಖಾನುಪುಂಖವಾಗಿ ನೀಡುತ್ತಿರುವ ಅತ್ಯಮೂಲ್ಯ ಕೊಡುಗೆಗಳು ಯಾರಿಗೂ ಆಶ್ಚರ್ಯ ಮೂಡಿಸುತ್ತವೆ.

ಶ್ರೀಯುತರು ವಿದ್ಯಾಕ್ಷೇತ್ರಕ್ಕೆ ಸಲ್ಲಿಸುತ್ತಿರುವ ಸೇವೆ, ಸಮಾಜ ಕಲ್ಯಾಣ ಮತ್ತು ಕುಟುಂಬ ಯೋಜನೆ ಕಾರ್ಯಕ್ರಮಗಳು, ಕೃಷಿಯಲ್ಲಿನ ಪ್ರಗತಿ, ವೈದ್ಯಕೀಯ ಸೇವೆ, ಸತ್ ಕಾರ್ಯಗಳಿಗಾಗಿ ನೀಡುತ್ತಿರುವ ದೇಣಿಗೆ ಮತ್ತು ಅವರ ಧ್ಯೇಯ ಧೋರಣೆ, ಜೀವನ ಶೈಲಿ ಇತ್ಯಾದಿ ವಿಷಯಗಳನ್ನು ಕೂಲಂಕುಷವಾಗಿ ಬರೆದರೆ ಅದೊಂದು ಮಹಾಗ್ರಂಥವಾಗಬಲ್ಲದು. ಶ್ರೀಯುತರ ಅವಿರತ ಪ್ರಯತ್ನದಿಂದಾಗಿ ಗಗನ ಕುಸುಮಗಳೆನಿಸಿದ್ದವುಗಳು ಸುಳ್ಯದ ಜನತೆಗೆ ಲಭಿಸಿವೆ. 1950 ರಿಂದಲೂ ತಮ್ಮನ್ನು ಸಾರ್ವಜನಿಕ ಸೇವೆಯಲ್ಲಿ ತೊಡಗಿಸಿಕೊಂಡು ಬಂದಿರುವ ಇವರು ಸುಳ್ಯ ಒಂದು ತಾಲೂಕಾಗಿ ಅಸ್ತಿತ್ವಕ್ಕೆ ಬರುವಲ್ಲಿನ ಹೋರಾಟ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ನ್ಯಾಯಾಲಯ ಸ್ಥಾಪನೆ; ಸುಳ್ಯಕ್ಕೆ ವಿದ್ಯುಚ್ಛಕ್ತಿ ಪೂರೈಕೆ ಮತ್ತು ಪುರಸಭಾಧ್ಯಕ್ಷರಾಗಿ ಪಟ್ಟಣಕ್ಕೆ ಅಧಿಕ ನೀರಿನ ಪೂರೈಕೆ, ಡಾಮರು ರಸ್ತೆಯ ರಚನೆ, ಭೂಹೀನರಿಗೆ ಮನೆ ನಿವೇಶನದ ಹಂಚಿಕೆ ಮತ್ತು ಕಡಿಮೆ ವೆಚ್ಚದಲ್ಲಿ ಮನೆಕಟ್ಟಿಸಿದ್ದು; ಶ್ರೀಯುತರ ಅವಿಸ್ಮರಣೀಯ ಸಾಧನೆಗಳಲ್ಲಿ ಕೆಲವು ಮಾತ್ರ. ವಿದ್ಯಾ ಪೋಷಕರಾಗಿ, ಸಮಾಜ ಸುಧಾರಕರಾಗಿ ಮತ್ತು ಮಹಾದಾನಿಯಾಗಿ ಅವರು ಸಮಾಜಕ್ಕೆ ಮತ್ತು ದೇಶಕ್ಕೆ ಸಲ್ಲಿಸುತ್ತಿರುವ ಶಾಶ್ವತ ಕೊಡುಗೆಗಳ ಹಿನ್ನೆಲೆಯಲ್ಲಿ ಅವರಿಗೆ ಲಭಿಸಿರುವ ರಾಜೀವ ಗಾಂಧಿ ರಾಷ್ಟ್ರೀಯ ಏಕತಾ ಪ್ರಶಸ್ತಿ ಅರ್ಥಪೂರ್ಣವೆನಿಸಿದೆ. ಲೋಕಸಭಾ ಸ್ಪೀಕರ್ ಶ್ರೀ ಶಿವರಾಜ ಪಾಟೀಲರಿಂದ ನೀಡಲಾದ ಈ ಪ್ರಶಸ್ತಿ ಶ್ರೀ ಕುರುಂಜಿಯವರಿಗೆ ಸಂದ ರಾಷ್ಟ್ರ ಗೌರವ.

**ಅಮರ ಶಿಲ್ಪಿಯ ಕಮ್ಮಟದಲ್ಲಿ ಸುಂದರ ಮಿನಿಭಾರತವಾಗಿಹ ಈ ಸುಳ್ಯ.**

ಜಡಶಿಲೆಯೊಂದು ಶಿಲ್ಪಿಯ ಕೈಯಲ್ಲಿ ಸುಂದರ ಕಲಾಕೃತಿಯಾಗಿ ರೂಪುಗೊಂಡು ಸಾರ್ಥಕ್ಯಗಳಿಸುತ್ತದೆ. ಅಂತೆಯೇ ರಾಜ್ಯದ ಹೆದ್ದಾರಿಯಲ್ಲಿದ್ದೂ ಜಡ್ಡಾಗಿ, ಜಡಹಿಡಿದು ಜಟಾಧಾರಿಯಂತೆ ಮುಳಿಮನೆಗಳಿಂದ ತುಂಬಿ, ಸಂಜೆಯಾದೊಡನೆ ಮುಚ್ಚಿಕೊಳ್ಳುವ ಮಕ್ಕಳ ಕಣ್ಣುಗಳಂತೆ ತನ್ನೆಲ್ಲಾ ವಹಿವಾಟ ನಿಲ್ಲಿಸಿ ಕತ್ತಲಪ್ಪುಗೆಯಲ್ಲಿ ಲೀನವಾಗುತ್ತಿದ್ದ ಈ ಸುಳ್ಯ ಇಂದು ರೂವಾರಿ ಶ್ರೀ ಕುರುಂಜಿಯವರಿತ್ತ ಉಳಿಯ ಸ್ಪರ್ಶದಿಂದಾಗಿ ಮೈಗೊಡವಿ ಮೇಲೆದ್ದು ಕಾಂಕ್ರೀಟು ಕಟ್ಟಡಗಳಿಂದ ಮೈ ತಳೆದು ನಳನಳಿಸುತ್ತಿದೆ. ರಾತ್ರಿಯೆಂಬುದಿಲ್ಲ ಹಗಲು, ಹಗಲೊಂದು ಅಧ್ಭುತವು. ನವ ವಧುವಿನಂತೆ ವಿನೂತನ ಸುಂದರ ಕಟ್ಟಡಗಳಿಂದಾವೃತವಾದ

ಆಡಲಾಗದವಳಿಗೆ ಅಂಗಳ ಡೊಂಕು

ಕುರುಂಜಿಬಾಗಿನ ವಿದ್ಯಾನಗರದ ಸೊಗಸು ಸೃಜನಶೀಲ ವಾಸ್ತುಶಿಲ್ಪಿಯ ಅಂತರಾಳದಲ್ಲಿ ಹುದುಗಿರುವ ಭಾವ ತಂತುಗಳಿಗೆ ಆಕಾರಕೊಟ್ಟಂತೆ. ಮೂಡಿಮರೆಯಾಗುವ ಸುಂದರ ಕನಸುಗಳನ್ನೆಲ್ಲಾ ಹೆಪ್ಪುಗಟ್ಟಿಸಿ ಇಟ್ಟಂತೆ. ರಾಜ್ಯ ಮತ್ತು ರಾಷ್ಟ್ರದ ನಾನಾ ಭಾಗಗಳಿಂದ ಮತ್ತು ಹೊರ ರಾಷ್ಟ್ರಗಳಿಂದ ವಿದ್ಯಾಭ್ಯಾಸಕ್ಕಾಗಿ ಆಗಮಿಸಿರುವ ವಿದ್ಯಾರ್ಥಿ ವಿದ್ಯಾರ್ಥಿನಿಯರ ವೈವಿಧ್ಯಮಯವಾದ ಸಂಸ್ಕೃತಿ, ಭಾಷೆ, ಉಡುಪು ಇತ್ಯಾದಿಗಳ ನಿತ್ಯೋತ್ಸವ, ಸಂಸ್ಕೃತಿ ಮತ್ತು ಭಾವೈಕ್ಯತಾ ಪ್ರಿಯರಿಗೆ ರಸದೌತಣ. ವಿಶಾಲ ಭಾರತದ ಸುಂದರ ಚಿತ್ರವನ್ನು ಸುಳ್ಯವೆಂಬ ಪುಟ್ಟ ಹಾಳೆಯ ಮೇಲೆ ಕಲಾತ್ಮಕವಾಗಿ ನಮೂದಿಸಿರುವ ಈ ಮಹಾನ್ ಚಿತ್ರಕಾರ ಶ್ರೀ ಕುರುಂಜಿಯವರು ಸಾಗರವನ್ನು ಗಾಗರ(ಕುದಿಕೆ)ದಲ್ಲಿ ತುಂಬಿಡುವಂತಹ ಪವಾಡ ಪುರುಷರಲ್ಲವೆ!ಇಂದು ಸುಳ್ಯ ರಾಷ್ಟ್ರ ಮಟ್ಟದಲ್ಲಿ ಹೆಸರುಗೊಂಡಿರುವುದರ ಹಿಂದೆ ಇವರ ಪರಿಶ್ರಮದ ಬೆವರ ಹನಿಗಳ ಮಡುವಿದೆ.

**ಶ್ರೀ ಕುರುಂಜಿಯವರು ಮತ್ತು ಸುಳ್ಯ- ಇವೆರಡರ ಗಂಟು ನಂಟು ಒಡಲು -ಉಸಿರಿನಂತಿಹುದು.**

ಶ್ರೀ ಕುರುಂಜಿಯವರಿಂದಾಗಿ ಸುಳ್ಯದ ಜನತೆಗೆ ಆಗಿರುವ ಪ್ರಯೋಜನವನ್ನು ಎಷ್ಟೆಂದು ಹೇಳಲು ಸಾಧ್ಯವಿಲ್ಲ. ಸುಳ್ಯದ ಸಮಗ್ರ ಬೆಳವಣಿಗೆಯಲ್ಲಿ ಅವರ ಕರ್ತೃತ್ವ ಶಕ್ತಿ ಮತ್ತು ಕ್ರೀಯಾಶೀಲತೆಯನ್ನು ಕಾಣಬಹುದಾಗಿದೆ. ಶೈಕ್ಷಣಿಕವಾಗಿ ಬಹುವಾಗಿ ಹಿಂದಿದ್ದ ಸುಳ್ಯದಲ್ಲಿನ ಬಡ ವಿದ್ಯಾರ್ಥಿಗಳಿಗೆ ಕಾಲೇಜು ವಿದ್ಯಾಭ್ಯಾಸ ನಿಲುಕದ ವಸ್ತುವಾಗಿತ್ತು. ಏಕೆಂದರೆ ಅವರು ಪುತ್ತೂರು ಅಥವಾ ಮಂಗಳೂರಿಗೆ ಹೋಗಿ ಅಲ್ಲಿಯೇ ನಿಂತು ವಿದ್ಯಾಭ್ಯಾಸ ಮಾಡಲು ಶಕ್ತರಾಗಿರಲಿಲ್ಲ. ಹೆಣ್ಣು ಮಕ್ಕಳಂತೂ ಹೊರಗೆ ಹೋಗಿ ಕಲಿಯುವುದು ಅಪರೂಪವಾಗಿತ್ತು. ಆದರೆ ಇಂದು ಶ್ರೀ ಕುರುಂಜಿಯವರಿಂದಾಗಿ ಬಡಕುಟುಂಬದ ಮಕ್ಕಳೂ ಪದವೀಧರರಾಗಲು ಸಾಧ್ಯವಾಗಿದೆ. ಇವರಿಂದಾಗಿಯೇ ನಮ್ಮ ಬಾಳು ಬಂಗಾರವಾಯಿತೆಂದು ಬಾಯಿತುಂಬಾ ಕೊಂಡಾಡುವವರು ಊರುತುಂಬಾ ಕಂಡು ಬರುತ್ತಾರೆ. ಶ್ರೀಯುತರಿಂದ ನಮಗೇನು ಉಪಕಾರವಾಗಿಲ್ಲ, ಏಕೆಂದರೆ ನಮ್ಮ ಮಕ್ಕಳು ಅಲ್ಲಿ ಕಲಿಯುತ್ತಿಲ್ಲವೆಂದು ಹೇಳುವವರು ಇಲ್ಲದಿಲ್ಲ. ಆದರೆ ಅಂತವರೂ ಸಹ ಇವರಿಂದ ಪರೋಕ್ಷವಾಗಿ ಉಪಕೃತರಾಗಿದ್ದಾರೆ. ಹೇಗೆಂದರೆ ಸುಳ್ಯದಲ್ಲಿ 1976ರ ನಂತರ ಹೊಟೇಲು, ಜವುಳಿ, ದಿನಸಿ, ಸ್ಟುಡಿಯೋ, ಸ್ಟೇಷನರಿ ಇತ್ಯಾದಿ ವ್ಯಾಪಾರದ ವಹಿವಾಟು ಹೆಚ್ಚಾಗಿ ಅದರಲ್ಲಿ ತೊಡಗಿರುವ ವ್ಯಾಪಾರಿಗಳು ಅಭಿವೃದ್ಧಿ ಕಾಣಲು ಇಲ್ಲಿಯ ವಿದ್ಯಾಸಂಸ್ಥೆಗಳಲ್ಲಿರುವ ಸುಮಾರು 5000ಕ್ಕೂ ಮಿಕ್ಕಿದ ವಿದ್ಯಾರ್ಥಿಗಳಿಂದಲ್ಲವೆ? ಒಂದು ಸೆಲೂನಿನಿಂದ ಹಿಡಿದು ಸುಳ್ಯ ಪೇಟೆಯಲ್ಲಿರುವ ಪ್ರತಿಯೊಬ್ಬ ವ್ಯಾಪಾರಿಯೂ ತಮ್ಮ ತಮ್ಮ ವ್ಯಾಪಾರದಲ್ಲಿ ಏಳಿಗೆ ಹೊಂದುತ್ತಿರುವುದು ಇವರಿಂದಲ್ಲವೆ? ಇಲ್ಲಿಯ ವಿದ್ಯಾಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅಧ್ಯಾಪಕರು ಮತ್ತು ವ್ಯಾಸಂಗ ನಿರತರಾಗಿರುವ ವಿದ್ಯಾರ್ಥಿಗಳ ವಸತಿಗಾಗಿ ಮನೆ ಮತ್ತು ರೂಮುಗಳನ್ನು ಕಟ್ಟಿ ಹಣಗಳಿಸುತ್ತಿರುವವರ ಸಂಖ್ಯೆಯೇನು ಕಡಿಮೆಯೆ? ಬಾಡಿಗೆಗಾಗಿ ಮನೆಕಟ್ಟುವ ಪ್ರವೃತ್ತಿಯೆ ಇಲ್ಲದಿದ್ದ ಸುಳ್ಯ ಪೇಟೆಯಲ್ಲಿ ಬಾಡಿಗೆ ಸಂಪಾದಿಸುವುದಕ್ಕಾಗಿಯೆ ಮನೆಕಟ್ಟುವ ಕಾರ್ಯ ಭರದಿಂದ ಸಾಗುತ್ತಿಲ್ಲವೆ? ಇಂಥವರಿಗೆಲ್ಲಾ ಶ್ರೀ ಕುರುಂಜಿಯವರ ಯೋಜನೆಗಳೆ ಆಶಾಕಿರಣವಲ್ಲವೆ? ಹೀಗೆ ವಿಶ್ಲೇಷಣೆ ಮಾಡುತ್ತಾ ಹೊರಟರೆ ಈ ಊರಿನ ಸರ್ವರ ಬೆಳವಣಿಗೆ ಮತ್ತು ಸಕಲ ಅಭಿವೃದ್ಧಿಯಲ್ಲಿ ಶ್ರೀ ಕುರುಂಜಿಯವರ ಛಾಪನ್ನು ಕಾಣಬಹುದಾಗಿದೆ. ಆದುದರಿಂದ ಇವರಿಂದ ಸುಳ್ಯವನ್ನು, ಸುಳ್ಯದಿಂದ ಇವರನ್ನು ಬೇರ್ಪಡಿಸಿ ನೋಡುವುದೆಂದರೆ ಬತ್ತಿ ಮತ್ತು ಎಣ್ಣೆಯನ್ನು ಬೇರ್ಪಡಿಸಿ ಬೆಳಕು ಪಡೆಯಲು ಯತ್ನಿಸಿದಂತೆ. ಶ್ರೀ ಕುರುಂಜಿಯವರೆಂದರೆ ಈ ಊರಿನ ಭಾಗ್ಯದ ಬಾಗಿಲು ಸದಾ ಕಾಲಕ್ಕೂ ಪ್ರಕಾಶ ಬೀರುತ್ತಾ ದಾರಿತೋರುವ ನಂದಾದೀಪ.

**ವಿದ್ಯಾ ದೇಗುಲಗಳ ಸಾಲಲ್ಲಿ ಮೊಳಗಿಹ ಜ್ಞಾನದ ಘಂಟಾನಾದ**

"ಯಾರು ಒಂದು ಶಾಲೆಯನ್ನು ತೆರೆಯುತ್ತಾರೋ ಅವರು ನಿಜವಾಗಿಯೂ ಒಂದು ಸೆರೆಮನೆಯನ್ನು ಮುಚ್ಚುತ್ತಾರೆ" ಹೀಗೆಂದು ಪ್ರಸಿದ್ಧ ಲೇಖಕ ವಿಕ್ಟರ್ ಹ್ಯೂಗೋ ನುಡಿದಿದ್ದಾನೆ. ಈ ಮಾತಿನ ಆಧಾರದ ಮೇಲೆಯೇ ಹೇಳುವುದಾದರೆ ಶ್ರೀ ಕುರುಂಜಿಯವರು ನಮ್ಮ ಸಮಾಜಕ್ಕೆ ವಿದ್ಯಾಕ್ಷೇತ್ರದಲ್ಲಿ ನೀಡಿರುವ ಕೊಡುಗೆಗೆ ಬೆಲೆ ಕಟ್ಟಲು ಸಾಧ್ಯವೆ? ದ.ಕ. ಜಿಲ್ಲೆಯಲ್ಲಿ ಮೂಲೆ ಗುಂಪಾಗಿದ್ದ ಸುಳ್ಯವು ಇಂದು ರಾಷ್ಟ್ರಮಟ್ಟದಲ್ಲಿ ರಾರಾಜಿಸುತ್ತಿರುವಂತಾಗಲು ಶ್ರೀಯುತರು ನಡೆಸಿದ ಭಗೀರಥ ಪ್ರಯತ್ನವನ್ನು ಅರಿಯದವರಿಲ್ಲ. ಇವರು ಈ ದಿಶೆಯಲ್ಲಿ ಕೈಗೊಂಡ ಕಾರ್ಯಗಳೆಲ್ಲವೂ, ವಾಮನನ ಹೆಜ್ಜೆಯಷ್ಟೆ ಬೃಹತ್ತಾದುದಾಗಿವೆ. ಸುಳ್ಯದ ಇತಿಹಾಸದಲ್ಲಿಯೆ ಶಿಕ್ಷಣ ರಂಗದಲ್ಲಿ ಸುವರ್ಣ ಅಧ್ಯಾಯವನ್ನು ಆರಂಭಿಸಿದ ಧೀಮಂತರಿವರು. ಈ ಊರಿನಲ್ಲಿ ಪ್ರಥಮ ದರ್ಜೆಯ ಕಾಲೇಜು ಸ್ಥಾಪನೆಯ ಅಸಾಧ್ಯವೆಂದು ಬಗೆದಿದ್ದಲ್ಲಿ ಜನರು ಕನಸ್ಸಿನಲ್ಲಿಯೂ ಊಹಿಸದಿದ್ದ ಇಂಜಿನಿಯರಿಂಗ್ ಮತ್ತು ಡೆಂಟಲ್ ಕಾಲೇಜುಗಳನ್ನು ಸ್ಥಾಪಿಸುವುದರ ಮೂಲಕ ಅಸಾಧ್ಯವಾದುದನ್ನು ಸಾಧ್ಯವೆಂದು ಮಾಡಿ ತೋರಿಸಿದ್ದಾರೆ. "ನನ್ನ ಶಬ್ಧ ಕೋಶದಲ್ಲಿ ಅಸಾಧ್ಯ ಎಂಬ ಪದವಿಲ್ಲ" ಎಂದು ಹೇಳುವ ಶ್ರೀ ಕುರುಂಜಿಯವರು ಈ ತನಕವೂ ತಮ್ಮೆಲ್ಲಾ ಉದ್ದೇಶ ಮತ್ತು ಗುರಿಯಲ್ಲಿ ಸಫಲರಾಗುತ್ತಿದ್ದಾರೆ. 1976ರಲ್ಲಿ ನೆಹರೂ ಸ್ಮಾರಕ ಕಲಾ ಮತ್ತು ವಾಣಿಜ್ಯ ಕಾಲೇಜಿನ ಸ್ಥಾಪನೆಯೊಂದಿಗೆ ಆರಂಭಗೊಂಡ ಶಿಕ್ಷಣ ರಂಗದಲ್ಲಿನ ಇವರ ಚಟುವಟಿಕೆ ನಿರಂತರವಾಗಿ ಮುಂದುವರಿಯುತ್ತಿದ್ದು ಕಳೆದ 20 ವರ್ಷಗಳಲ್ಲಿ ತಮ್ಮದೇ ಆದ 30 ಸಂಸ್ಥೆಗಳಿಗೆ ಜನ್ಮ ನೀಡಿದ್ದಾರೆ. ನೆಹರು ಸ್ಮಾರಕ ಕಾಲೇಜು, ಕೆ.ವಿ.ಜಿ. ಪಾಲಿಟೆಕ್ನಿಕ್, ಕೆ.ವಿ.ಜಿ. ಇಂಡಸ್ಟ್ರಿಯಲ್ ಟ್ರೈನಿಂಗ್ ಇಂಸ್ಟಿಟ್ಯೂಟ್, ಕೆ.ವಿ.ಜಿ. ಇಂಜಿನಿಯರಿಂಗ್ ಕಾಲೇಜು, ಕೆ.ವಿ.ಜಿ. ಕಾನೂನು ಕಾಲೇಜು, ಕೆ.ವಿ.ಜಿ. ನರ್ಸಿಂಗ್ ಕಾಲೇಜು ಮತ್ತುಕೆ.ವಿ.ಜಿ ಆಂಗ್ಲ ಮಾಧ್ಯಮ ಪ್ರೌಢಶಾಲೆ 10 ಹಾಸ್ಟೆಲುಗಳು ಇವೆಲ್ಲವೂ ಕುರುಂಜಿ ಭಾಗ್‌ನಲ್ಲಿರುವ ಸುಮಾರು 50 ಎಕರೆ ಭೂಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿವೆ.

*(ಮುಂದಿನ ಸಂಚಿಕೆಯಲ್ಲಿ ಮುಂದುವರಿಯುವುದು)*

ಬಡವನ ಊಟ ಚೆಂದ, ದೊಡ್ಡವನ ಮಾತು ಚೆಂದ

# ಶ್ರೀ ಶೃಂಗೇರಿ ಪೀಠದೊಂದಿಗೆ ಗೌಡರ ಪುರಾತನ ಸಂಬಂಧ

ಕ್ರಿ. ಶ. ಸುಮಾರು 8ನೇ ಶತಮಾನದಲ್ಲಿ ವೈದಿಕ ಧರ್ಮವು ಅವಸಾನ ಸ್ಥಿತಿಯಲ್ಲಿದ್ದಾಗ ಸಾಕ್ಷಾತ್ ಪರಮೇಶ್ವರನೇ ಶಂಕರರ ರೂಪದಲ್ಲಿ ಈಗಿನ ಕೇರಳದ ಕಾಲಟಿ ಎಂಬಲ್ಲಿ ಜನ್ಮತಾಳಿದರು. ತಮ್ಮ 8ನೇ ವಯಸ್ಸಿಗೆ ಸನ್ಯಾಸ ಸ್ವೀಕರಿಸಿ ಗುರುವನ್ನು ಅರಸುತ್ತಾ ಉತ್ತರದ ಕಡೆಗೆ ನಡೆದರು. ಆಗ ಶ್ರೀ ಗೋವಿಂದ ಭಗವತ್ಪಾದರು ಇವರಿಗೆ ಗುರುವಾಗಿ ದೊರೆತರು.

ಶ್ರೀ ವಿದ್ಯೆ, ಬ್ರಹ್ಮವಿದ್ಯೆಗಳು ಅದ್ವೈತವನ್ನೇ ಭೋಧಿಸುತ್ತವೆ. ಈ ಶ್ರೇಷ್ಠವಾದ ಆತ್ಮಜ್ಞಾನವು ಪರಮೇಶ್ವರನಿಂದ ಉದ್ಭವಿಸಿತು. ಅವನು ಅದನ್ನು ನಾರಾಯಣ ಸ್ವರೂಪದಲ್ಲಿ ಜಗದ ಸೃಷ್ಟಿಕರ್ತನಾಗಿ ಬ್ರಹ್ಮನಿಗೆ, ಬ್ರಹ್ಮವಿದ್ಯೆ ಎಂಬ ಆತ್ಮಜ್ಞಾನವನ್ನು ತಿಳಿಸಿದನು. ಬ್ರಹ್ಮನಿಂದ ಋಷಿಗಳ ವಂಶಾವಳಿಗೆ ಬರುತ್ತದೆ. ಬ್ರಹ್ಮನಿಂದ ಕ್ರಮವಾಗಿ ವಸಿಷ್ಠ, ಶಕ್ತಿ, ಪರಾಶರ, ವ್ಯಾಸ, ಮತ್ತು ಶುಕರಿಗೆ, ಶುಕರ ಆನಂತರ ಗುರುಗಳ ಪಂಕ್ತಿಯನ್ನು ಅನುಸರಿಸಿತು ವ್ಯಾಸರ ಪುತ್ರ ಶುಕಮುನಿಗಳು ಬ್ರಹ್ಮ ನಿಷ್ಠರು. ಇವರ ಬ್ರಹ್ಮನಿಷ್ಠತೆಗೆ ಒಂದು ಕತೆಯಿದೆ. ಬ್ರಹ್ಮನಿಷ್ಠರಾದ ಶುಕರು ಭವದ ಬಂಧನವನ್ನು ತೊರೆದು ಹೊರಟಾಗ ವ್ಯಾಸರು ಪುತ್ರ ವ್ಯಾಮೋಹದಿಂದ ಶುಕ ಶುಕ ಎಂದು ಹಿಂದೆಯೇ ಹೊರಟರು. ದಾರಿಯಲ್ಲಿ ಒಂದು ನದಿಯಲ್ಲಿ ಸ್ನಾನ ಮಾಡುತ್ತಿದ್ದ ಶೋಡಷಿಯರು ಶುಕರನ್ನು ಕಂಡು ಬೆತ್ತಲೆಯಾಗಿಯೇ ಬಂದು ನಮಸ್ಕರಿಸಿದರಂತೆ. ಹಿಂದೆ ಓಡುತ್ತಾ ಬರುತ್ತಿದ್ದ ವ್ಯಾಸರನ್ನು ಕಂಡು ಅವಸರದಿಂದ ತಮ್ಮ ಶರೀರವನ್ನು ವಸ್ತ್ರಗಳಿಂದ ಮುಚ್ಚಿಕೊಂಡರಂತೆ. ಇದನ್ನು ಕಂಡ ವ್ಯಾಸರು ಕುತೂಹಲದಿಂದ ಪ್ರಶ್ನೆ ಮಾಡಿದರು. ತರುಣನಾದ ಶುಕನನ್ನು ಕಂಡಾಗ ಇಲ್ಲದ ನಾಚಿಕೆ ವೃದ್ಧನಾದ ನನ್ನನ್ನು ಕಂಡಾಗ ಯಾಕೆ ಎಂದು. ಆಗ ಆ ತರುಣಿಯರು ಇಂತೆಂದು ನುಡಿಯುತ್ತಾರೆ, ವಿಷಯದ ವಾಸನೆ ನಿಮ್ಮನ್ನು ಬಿಟ್ಟಿಲ್ಲ. ಶುಕರಾದರೊ ಪ್ರಾಪಂಚಿಕ ವ್ಯಾಪಾರವನ್ನು ತೊರೆದ ಬ್ರಹ್ಮನಿಷ್ಠರು. ಸ್ತ್ರೀ ಪುರುಷರೆಂಬ ದ್ವಂದ್ವವನ್ನು ಅರಿಯದವರು ಎಂದು.

ಇಂತಹ ಶುಕರ ಶಿಷ್ಯರೇ ಶ್ರೀ ಗೌಡಪಾದಾಚಾರ್ಯರು. ಈ ಶ್ಲೋಕವನ್ನು ಗಮನಿಸಿ" ಗೌಡ ಚರಣಾಃ ಕುರುಕ್ಷೇತ್ರಗತ ಹೀರಾವತೀ ನದೀತೀರ ಭವ ಗೌಡ ಜಾತಿ ಶ್ರೇಷ್ಠಾ : ದೇಶ ವಿಶೇಷ ಭವಜಾತಿ ನಾಮ್ನೈವ ಪ್ರಸಿದ್ಧಾಃ" (ಬಾಲ ಕೃಷ್ಣಾನಂದ ಸರಸ್ವತಿ) ಕುರುಕ್ಷೇತ್ರದ ಸಮೀಪದಲ್ಲಿ ಹೀರಾವತಿ ನದೀ ತೀರದಲ್ಲಿ ಜನಿಸಿ ಬದರಿಯಲ್ಲಿ ಧ್ಯಾನ ಮಾಡುತ್ತಾ ನೂರಕ್ಕಿಂತ ಹೆಚ್ಚು ಕಾಲ ಜೀವಿಸಿದ್ದ ಗೌಡಪಾದರೇ ಗುರುಪಂಕ್ತಿಯಲ್ಲಿ ಮೊಟ್ಟ ಮೊದಲಿಗರು. ಇವರ ಶಿಷ್ಯರೇ ಶ್ರೀ ಗೋವಿಂದ ಭಗವತ್ಪಾದರು. ಇವರ ಶಿಷ್ಯರೇ ಶ್ರೀ ಶಂಕರಾಚಾರ್ಯರು. ಗುರುಪಂಕ್ತಿಯಲ್ಲಿ ಮೂರನೆ ಸ್ಥಾನ ಇವರದು.

ಶ್ರೀ ಶಂಕರಾಚಾರ್ಯರ ಜನ್ಮಕಾಲವು ವಿದ್ವಾಂಸರನ್ನು ದಿಙ್ಮೂಢರನ್ನಾಗಿಸಿದೆ. ಅವರ ಭಿನ್ನಾಭಿಪ್ರಾಯ ಕ್ರಿ.ಪೂ. 509 ಕ್ರಿ. ಶ. 8ನೇ ಶತಮಾನದ ವರೆಗೂ ವಿಸ್ತರಿಸಿದೆ. ಹೀಗಿರುವಾಗ ನಾವು ಶ್ರೀ ಗೌಡಪಾದರ ಜೀವಿತ ಕಾಲವನ್ನು ಪರಿಗಣಿಸುವುದು ಕಷ್ಟ. ಆದರೆ ಈಶ್ವರ ಕೃಷ್ಣರವರ ಸಾಂಖ್ಯಕಾರಿಕೆಯ ಭಾಷ್ಯವು 'ಟ'ಲಿಂಗನ ವಂಶದ ಕಾಲದಲ್ಲಿ ಚೀನೀ ಭಾಷೆಗೆ ಭಾಷಾಂತರಿಸಲ್ಪಟ್ಟಿತು. ಶ್ರೀ ಗೌಡಪಾದರ ಕಾಲವನ್ನು ಶೋಧಿಸುವುದಕ್ಕೆ ಇದು ಸಹಾಯವಾಗಬಹುದು. ಈಶ್ವರ ಕೃಷ್ಣರ ಸಾಂಖ್ಯಕಾರಿಕೆಯ ಭಾಷ್ಯವು ಇವರ ಮೊದಲ ಕೃತಿಯು. ಇವರು ವಿವರ್ತವಾದದ ತನ್ನ ಪ್ರತಿಪಾದನೆಯಿಂದ ವೇದಾಂತ ವಿಚಾರಗಳನ್ನು ಬಲಪಡಿಸಿದ್ದರು. ಮಾಂಡೂಕ್ಯಕಾರಿಕೆಯು ಇವರ ಉತ್ತಮ ಗ್ರಂಥವಾಗಿದೆ. ಉತ್ತರ ಗೀತೆ, ನೃಸಿಂಹತಾಪಿನೀ ಮತ್ತು ದುರ್ಗಾ ಸಪ್ತಶತಿ ಇವುಗಳ ಭಾಷ್ಯ ಮತ್ತು ಶ್ರೀವಿದ್ಯಾ ರತ್ನಸೂತ್ರ ಮತ್ತು ಸುಭಗೋದಯ ಎಂಬ ಶ್ರೀ ವಿದ್ಯೆಯ ಎರಡು ಗ್ರಂಥಗಳು ಅವರ ಇತರ ಕೃತಿಗಳು. ನಂತರ ಶ್ರೀ ಶಂಕರಾಚಾರ್ಯರು ಇವರ ಮಾಂಡೂಕ್ಯಕಾರಿಕೆಗೆ ಉತ್ತಮ ಭಾಷ್ಯವನ್ನು ರಚಿಸಿದರು. ಇದರಿಂದ ಪ್ರಸನ್ನಗೊಂಡ ಗೌಡ ಪಾದರು ಶ್ರೀಶಂಕರರಿಗೆ ಕಾಶಿ ಕ್ಷೇತ್ರದಲ್ಲಿ ದರುಶನವಿತ್ತು, ಕಾಶ್ಮೀರದಲ್ಲಿರುವ ಸರ್ವಜ್ಞ ಪೀಠವನ್ನು ಏರಲು ಅನುಮತಿ (ಸಲಹೆ) ನೀಡುತ್ತಾರೆ.

ಶ್ರೀ ಶಂಕರಾಚಾರ್ಯರು ಶೃಂಗೇರಿಯನ್ನು ತಮ್ಮ ಆಧ್ಯಾತ್ಮ ವಿಧ್ಯಾಕೇಂದ್ರವನ್ನಾಗಿರಿಸಿಕೊಂಡು, ದೇಶದಲೆಲ್ಲಾ ಸಂಚರಿಸಿ ಅದ್ವೈತ ಪ್ರತಿಪಾದನೆ ಮಂಡಿಸುತ್ತಾ, ಜನರಲ್ಲಿ ವೈದಿಕ ಧರ್ಮದ ಬಗ್ಗೆ ಮೂಡಿದ್ದ ಗೊಂದಲಗಳನ್ನು ದೂರ ಮಾಡುತ್ತಿದ್ದರು. ಹೀಗೆ ಸಂಚರಿ ಸುತ್ತಾ ಅವರು ಗೌಡದೇಶದಲ್ಲಿ ಪ್ರವೇಶಿಸಿ ಅಲ್ಲಿನ ಪಂಡಿತರಾದ ಮುರಾರಿ, ಮಿಶ್ರ, ಧರ್ಮಗುಪ್ತಾದಿಗಳೊಡನೆ ಸಂವಾದ ಮಾಡಿದ್ದಾರೆಂದು, "ಆಧ್ಯಾತ್ಮ ಶಂಕರ ವಿಜಯ" ದಿಂದ ತಿಳಿಯಬಹುದು. ಅಲ್ಲದೆ ಶ್ರೀ ಶಾರದಾ ಪೀಠವು ವೇದಾಂತ ಜ್ಞಾನವನ್ನು ವಿಸ್ತರಿಸುವ ಮುಖ್ಯ ಸ್ಥಾನವಾಗಿತ್ತು. ಈ ಉದ್ಯೋಗದಲ್ಲಿ ಕರ್ನಾಟಕ, ಚೋಳ, ಆಂಧ್ರ, ಮಹಾರಾಷ್ಟ್ರ ಮತ್ತು ಗೌಡದೇಶಗಳ ಜ್ಞಾನಿಗಳು (ವಿದ್ವಾಂಸರು) ಕೆಲಸ ಮಾಡುತ್ತಿದ್ದರು ಎಂಬುದು ತಿಳಿದು ಬರುತ್ತದೆ.

ಶ್ರೀ ಶಂಕರಾಚಾರ್ಯರ ನಂತರ (2)ಸುರೇಶ್ವರಾಚಾರ್ಯ (ಮಂಡನಮಿಶ್ರ)3.ಭೋಧಘನ(4)ಜ್ಞಾನಘನ (5)ಜ್ಞಾನೋತ್ತಮ ಶಿವಾಚಾರ್ಯರು ಶ್ರೀ ಶಂಕರಾಚಾರ್ಯ ಸ್ಥಾಪಿತ ದಕ್ಷಿಣಾಮ್ನಾಯ ಪೀಠ ಶೃಂಗೇರಿಯ ಐದನೇ ಗುರುವಾಗಿ ಬಂದರು. ಇವರು ಗೌಡ ರೆಂದು ತಿಳಿದು ಬಂದಿದೆ. ಇವರು ಶ್ರೀ ಜ್ಞಾನಘನಾಚಾರ್ಯರ ಉತ್ತರಾಧಿಕಾರಿಗಳು. ಚಿತ್ಸುಖೀಯ ಮೂರನೇ ಪರಿಚ್ಛೇದದ ಅಂತ್ಯಭಾಗದ ಉಪಸಂಹಾರ ವಾಕ್ಯದಲ್ಲಿ'' **ಗೌಡೇಶ್ವರಾಚಾರ್ಯ ಪರಮಹಂಸ ಪರಿವ್ರಾಜಕಾಚಾರ್ಯ ಜ್ಞಾನೋತ್ತಮ ಪೂಜ್ಯಪಾದ**'' ಎಂದು ಅವರ ವಿಚಾರದಲ್ಲಿ ಉಲ್ಲೇಖಿಸಿರುವುದ ರಿಂದ ಇವರು ಗೌಡರಾಗಿದ್ದು ದಕ್ಷಿಣಕ್ಕೆ ಬಂದು ನೆಲೆಸಿದವರಾಗಿರ ಬೇಕೆಂದು "ಶಾಂಕರ ದಕ್ಷಿಣಾಮ್ನಾಯ ಪೀಠ"ದ ಕೃತಿಯ ಕರ್ತೃಗಳು ಅಭಿಪ್ರಾಯ ಪಟ್ಟಿದ್ದಾರೆ. ಇವರ ಶಿಷ್ಯರೊಬ್ಬರು ತಮ್ಮ ಪ್ರಸಿದ್ಧ ಗ್ರಂಥವೊಂದರಲ್ಲಿ ಇವರನ್ನು ಜಗದ್ಗುರು (ಮೂರುಲೋಕದ ಗುರು) ಎಂದು ಕರೆದಿದ್ದಾರೆ. ಚಿತ್ಸುಖರು ಶ್ರೀ ಜ್ಞಾನೋತ್ತಮರನ್ನು ದಕ್ಷಿಣ ಮೂರ್ತಿ, ವ್ಯಾಸ ಮತ್ತು ಶ್ರೀಶಂಕರಾಚಾರ್ಯರ

ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು

ಪ್ರಭೆಯೇ ಎಂದು ಗೌರವಿಸಿದ್ದಾರೆ. ಈ ಮಹಾ ಗುರುಗಳ ಬಗ್ಗೆ ಇದಕ್ಕಿಂತ ಹೆಚ್ಚಿಗೆ ಇನ್ನೇನು ಬೇಕು?

ಶೃಂಗೇರಿ ಶಾರದಾ ಪೀಠದ ಶ್ರೀ ಜ್ಞಾನೋತ್ತಮ ಶಿವಾಚಾರ್ಯರು ನೈಷ್ಕರ್ಮಸಿದ್ಧಿ ಮತ್ತು ಇಷ್ಟ ಸಿದ್ಧಿಗಳ ವ್ಯಾಖ್ಯಾನ ಕರ್ತರಾದ ಮಹೋಪಾಧ್ಯಾಯ ಜ್ಞಾನೋತ್ತಮ ಮಿಶ್ರರಲ್ಲ. ಇವರು ಗೃಹಸ್ತರಾಗಿದ್ದು ಚೋಳ ದೇಶದ ಕೊಲೆರೋನ್‌ನಲ್ಲಿರುವ ಮಂಗಲಂ ಎಂಬ ಅಗ್ರಹಾರದವರೆಂದು ಹೇಳಿಕೊಂಡಿದ್ದಾರೆ. ಇವರೂ ಗೌಡರಾಗಿದ್ದು ತಮ್ಮ ಇಷ್ಟಸಿದ್ಧಿಯ ವ್ಯಾಖ್ಯಾನದಲ್ಲಿ ಆನಂದಾನುಭವ ಮತ್ತು ಅನುಭೂತಿಸ್ವರೂಪ ಇವರ ವ್ಯಾಖ್ಯಾನಗಳ ವಿಷಯವನ್ನು ಉದಾರವಾಗಿ ವರ್ಣಿಸಿದ್ದಾರೆಂದೂ ಮತ್ತು ಚಿತ್ಸುಖರಿಗೆ ಋಣಿಯಾಗಿದ್ದಾರೆಂದೂ ವಿ. ರಾಘವನ್ ಅವರು ನಿರ್ಣಯಾತ್ಮಕವಾಗಿ ತೋರಿಸಿದ್ದಾರೆ. ಆದ್ದರಿಂದ ಅವರು ಅನಂತರದ ಲೇಖಕರಾಗಿದ್ದು ಕ್ರಿ.ಶ. ಸುಮಾರು 12ನೇ ಶತಮಾನದವರಾಗಿರಬಹುದು. ಅವರ ಹೆಸರು ಗೃಹಸ್ತರಲ್ಲಿ ಬಹಳ ಅಸಾಧಾರಣವಾಗಿದ್ದುದರಿಂದ ಅವರು ತಮ್ಮ ಪಿತೃ ಗುರುವಿನ ಹೆಸರಿನಿಂದ ಕರೆಯಲ್ಪಟ್ಟಿದ್ದೇನೆಂದು ಹೇಳಿಕೊಂಡಿದ್ದಾರೆ. ಅವರ ಪಿತೃಗುರು ಶೃಂಗೇರಿಯ ಜಗದ್ಗುರುಗಳಾದ ಶ್ರೀ ಆಚಾರ್ಯ ಜ್ಞಾನೋತ್ತಮರಾದ್ದರಿಂದ ಬಹಳವಾಗಿ ಹಾಗೇ ಇರಬಹುದೆಂದು ಅಭಿಪ್ರಾಯವಾಗುತ್ತದೆ.

ಕ್ರಿ.ಶ. ಸುಮಾರು 9ನೇ ಶತಮಾನದ ಅಂತ್ಯ ಅಥವಾ 10ನೇ ಶತಮಾನದ ಆದಿಯಲ್ಲಿ ಗೌಡ, ಮಧ್ಯದೇಶ, ಕಾಶ್ಮೀರ ಮತ್ತು ಪಶ್ಚಿಮ ಭಾರತದಿಂದ ಜನರು ದಕ್ಷಿಣದಲ್ಲಿ ಬಂದು ನೆಲೆಸಿದ್ದರು. ಮೊದಲನೇ ರಾಜರಾಜ ಮತ್ತು ರಾಜೇಂದ್ರ ಚೋಳರು ಅವರಿಗೆ ಆಸ್ತಿಗಳನ್ನು ಕೊಟ್ಟಿದ್ದರು. ಅದರಲ್ಲಿ ಶೈವ, ಆಚಾರ್ಯ ಮತ್ತು ಉಪನಿಷದ್ವೇದಾಂತದ ಅನುಯಾಯಿಗಳಾದ ಕೆಲವರು ಚೋಳ ಮತ್ತು ಪಾಂಡ್ಯರ ಆಸ್ಥಾನಗಳಲ್ಲಿ ಸ್ವಾಮಿದೇವರು ಅಥವಾ ರಾಜ ಪುರೋಹಿತರುಗಳಾಗಿದ್ದರು ಎಂದು ಇತಿಹಾಸದಿಂದ ತಿಳಿದು ಬರುತ್ತದೆ.

ಇದರಿಂದ ತಿಳಿದು ಬರುವ ಇನ್ನೊಂದು ಸತ್ಯಾಂಶವೆಂದರೆ, ಹಿಂದೆ ನೈಧಿಕ ವಿದ್ಯೆಯಾದ ವೇದೋಪನಿಷತ್ತುಗಳನ್ನು ಕಲಿಯುವ ಹಕ್ಕು ಬ್ರಾಹ್ಮಣರನ್ನು ಬಿಟ್ಟರೆ ಕ್ಷತ್ರಿಯರಿಗೆ ಮಾತ್ರ ವಿಧಿತವಾಗಿತ್ತು. ಒಕ್ಕಲಿಗರು ಶೂದ್ರ ವರ್ಣಕ್ಕೆ ಸೇರಿದವರು. ವೈಶ್ಯರಿಗೂ ವಿದ್ಯೆ ನಿಷಿದ್ಧವಾಗಿತ್ತು. ಇಂತಹ ಕಠಿಣ ಕಾಲದಲ್ಲಿ ಗೌಡಪಾದಾಚಾರ್ಯರು ಶ್ರೀ ವಿದ್ಯಾ ಉಪಾಸಕರಾಗಿದ್ದರಲ್ಲದೆ ಶುಕಮುನಿಗಳಂತಹ ಬ್ರಹ್ಮನಿಷ್ಠರ ಶಿಷ್ಯರಾಗಿದ್ದರು, ಎಂದ ಮೇಲೆ ಗೌಡರು ಕ್ಷತ್ರಿಯರೇ ಇರಬೇಕು ಆದ್ದರಿಂದಲೇ ನಮ್ಮ ಹಿರಿಯರು ನಮ್ಮನ್ನು ಗೌಡರೆಂದು ಹೆಮ್ಮೆಯಿಂದ ಹೇಳಿಕೊಂಡು ಗೌಡದೇಶದಿಂದ ಬಂದ ಒಕ್ಕಲಿಗರನ್ನು ಸೂಚ್ಯವಾಗಿ ಒಕ್ಕಲಿಗ ಗೌಡ' ಎಂದು ಹೇಳುತ್ತಿದ್ದರು. ಬ್ರಾಹ್ಮಣರು ರಾಜಾಶ್ರಯ ಪಡೆದುದರಿಂದ ಕ್ಷತ್ರಿಯರಾದ ಇವರು ಶೃಂಗೇರಿ ಗುರುಗಳ ರಕ್ಷಣೆಯಲ್ಲಿ (ಗೌಡರಾದ ಜ್ಞಾನೋತ್ತಮರ ಕಾಲದಲ್ಲಿ) ಮಲೆನಾಡನ್ನು ಸೇರಿರಬಹುದೆಂದು ಊಹಿಸಬಹುದು. ಗೌಡ ಸಾರಸ್ವತ (ಕೊಂಕಣಿ) ಬ್ರಾಹ್ಮಣರು ಕೆಲವು ಆಚಾರ ವಿಚಾರದಲ್ಲಿ ನಮ್ಮನ್ನು ಹೋಲುತ್ತಿದ್ದರೂ ಅವರ ಭಾಷಾಶೈಲಿಯು ಒಂದಿನಿತು ಹೊಂದಾಣಿಕೆಯಾಗುವುದಿಲ್ಲವಾದ್ದರಿಂದ ಶೃಂಗೇರಿ ಗುರುಗಳು ಗೌಡ ಸಾರಸ್ವತರಲ್ಲಿ ಹವ್ಯಕರ ಭಾಷಾಶೈಲಿ ನಮ್ಮನ್ನು ಹೋಲುತ್ತದೆ. ಆದರೂ ಅವರು ಗೌಡ ಎಂಬ ಪದವನ್ನು ಎಲ್ಲೂ ಬಳಸಿಲ್ಲ. ಆದ್ದರಿಂದ ಇವರು ಗೌಡದೇಶದ ರಾಜರು ನಡೆಸುತ್ತಿದ್ದ ಯಾಗಾದಿಗಳಲ್ಲಿ ಹವಿಸ್ಸು ನೀಡುವ ಬ್ರಾಹ್ಮಣರಾಗಿದ್ದರೆಂದು ಹೇಳಬಹುದು. ಉತ್ತರ ದೇಶಗಳಿಂದ ತಂಡ ತಂಡವಾಗಿ ಬಂದ ಗುಂಪಿನ ನಡುವೆ ಹಲವಾರು ಭಾಷೆಗಳಿದ್ದು ಅವರಿವರಲ್ಲೇ ಅದಲು ಬದಲಾಗಿ ಹೆಚ್ಚಿನ ಭಾಷೆ ಸಾಮ್ಯವಿದ್ದರೂ ಮೂಲ ಹಾಗೆ ಉಳಿದಿದೆ. ಕ್ರಮೇಣ ಗೌಡರು ಒಕ್ಕಲು (ವ್ಯವಸಾಯ)ತನಕ್ಕೆ ಒಗ್ಗಿಕೊಂಡರೆಂದು ಕಾಣುತ್ತದೆ.

ಜ್ಞಾನೋತ್ತಮರು ಗೌಡರಾದ್ದರಿಂದಲೇ ಗೌಡರು ಶೃಂಗೇರಿಯ ಗುರುಗಳನ್ನು ನಮ್ಮ ಗುರುವೆಂದು ಸ್ವೀಕರಿಸಿ ನಡೆದು ಕೊಂಡರು. ಗೌಡರ ಮೂಲ ದೈವ ವೈಷ್ಣವಾರಾಧ್ಯ ಮೂರ್ತಿಯಾದ ಪುರಿಯ ಜಗನ್ನಾಥನೇ ಇರಬಹುದು. ಶಂಕರಾಚಾರ್ಯರು ಸ್ಥಾಪಿಸಿದ ನಾಲ್ಕು ಮೂಲ ಮಠದಲ್ಲಿ ಜಗನ್ನಾಥ ಮಠವು ಒಂದು. ಗೌಡರು ದಕ್ಷಿಣಕ್ಕೆ ಬಂದಾಗ ಜಗನಾಥನನ್ನು ಹೋಲುವ ವೆಂಕಟರಮಣನನ್ನು ತಮ್ಮ ಕುಲದೈವ ಎಂದು ಸ್ವೀಕರಿಸಿರಬಹುದು. ಮುಂದೆ ಜ್ಞಾನೋತ್ತಮ ಗುರುಗಳ ಭೋಧನೆಯಿಂದ ಅದ್ವೈತ ತತ್ವವನ್ನರಿತು ಶಾರದೆಯನ್ನು ವೆಂಕಟನ ತಂಗಿ ಎಂದು ನಡೆದು ಕೊಂಡಿರಬಹುದು. ಇವರ ಕಾಲದಲ್ಲಿಯೇ ಶೃಂಗೇರಿಯಲ್ಲಿ ಜನಾರ್ಧನ ದೇವಾಲಯವು ಸ್ಥಾಪಿಸಲ್ಪಟ್ಟಿತು. "ಯಲಹಂಕೆಯ ಮುಖ್ಯಾಧಿಕಾರಿಯಾಗಿದ್ದ ಮುಮ್ಮಡಿ ದೊಡ್ಡ ವೀರಪ್ಪ ಗೌಡನು ಸೀಗೆಕುಪ್ಪೆ ಎಂಬ ಗ್ರಾಮವನ್ನು ಮಠಕ್ಕೆ ದಾನ ಮಾಡಿದ" ಬಗ್ಗೆ "ಆಧ್ಯಾತ್ಮ ಶಂಕರ ವಿಜಯ" ದಲ್ಲಿ ಉಲ್ಲೇಖವಿದೆ. ಬಹುಷಃ ಇದು ವಿಜಯನಗರ ಅರಸರ ಕಾಲದಲ್ಲಿ ಇರಬಹುದು.

ರಾಜೇಂದ್ರ ಲಾಲ ಮಿತ್ರರು ಸೀತಾ ಮರ್ಹಿ (ಬಿಹಾರದ ಮುಜಾಫ್ಫರ್ ಜಿಲ್ಲೆ) ಯಿಂದ ತುಂಬಾ ಪ್ರಯೋಜನಕರವಾದ ಹಸ್ತಲೇಖ ಪ್ರತಿಯೊಂದನ್ನು ಪ್ರಕಾಶಕ್ಕೆ ತಂದಿದ್ದಾರೆ. ಗದ್ಯವಲ್ಲರಿ ಎಂದು ಹೆಸರುಳ್ಳ ಶ್ರೀವಿದ್ಯಾ ಗ್ರಂಥವಾದ ಅದು ನ್ಯಾಸ ಮತ್ತು ಜಪ ಸಾಧನೆಗಳನ್ನು ವಿವರಿಸುತ್ತಾ ಒಂದು ಗುರು ಪರಂಪರೆಯನ್ನು ಗಣನೆ ಮಾಡುತ್ತದೆ. ಅದು ಶಿವನಿಂದ ಪ್ರಾರಂಭಿಸಿ ಕ್ರಮವಾಗಿ ವಿಷ್ಣು, ಬ್ರಹ್ಮಾ, ವಸಿಷ್ಠ, ಶಕ್ತಿ, ಪರಾಶರ, ವ್ಯಾಸ, ಶುಕ, ಗೌಡಪಾದ, ಗೋವಿಂದ, ಶಂಕರ, ವಿಶ್ವರೂಪ (ಸುರೇಶ್ವರಾಚಾರ್ಯ) ಬೋಧಘನ, ಜ್ಞಾನಘನ, ಜ್ಞಾನೋತ್ತಮ ಶಿವ, ಜ್ಞಾನ ಗಿರಿ, ಸಿಂಹಗಿರಿ, ಈಶ್ವರ ತೀರ್ಥ, ನೃಸಿಂಹ ತೀರ್ಥ, ವಿದ್ಯಾತೀರ್ಥ ಶಿವ, ಭಾರತೀ ತೀರ್ಥ ಮತ್ತು ವಿದ್ಯಾರಣ್ಯ (ವಿಜಯನಗರ ಸ್ಥಾಪನಾಚಾರ್ಯ), ಈ ವರೆಗಿನ ಪರಂಪರೆಯು ಶ್ರೀ ಶಾರದಾ ಪೀಠದ ಪ್ರಾಥಮಿಕ ಶಿಷ್ಯ ಪರಂಪರೆಗೆ ಅನುಗುಣವಾಗಿದೆ. ಅನಂತರ ಶ್ರೀ ವಿದ್ಯಾರಣ್ಯರಿಂದ ಶ್ರೀ ವಿದ್ಯೆಯ ಉಪದೇಶವನ್ನು ಪಡೆದ ಶ್ರೀ ಮಲಯಾನಂದದೇವ ತೀರ್ಥ ಸರಸ್ವತಿಯವರು ಹೇಳಲ್ಪಟ್ಟಮೇಲೆ ಶಿಷ್ಯ ಪರಂಪರೆಯು ಮುಂದುವರಿದು ಗ್ರಂಥಕರ್ತರಾದ ಶ್ರೀ ನಿಜಾತ್ಮ ಪ್ರಕಾಶಾನಂದನಾಥ ಮಲ್ಲಿಕಾರ್ಜುನ ಯೋಗಿಂದ್ರರ ಗುರುಗಳಾದ ಶ್ರೀ ಆನಂದ ಚಿತ್ಪ್ರತಿಬಿಂಬರಲ್ಲಿ ಅಂತ್ಯವಾಗುತ್ತದೆ.

**ಆಧಾರ ಗ್ರಂಥಗಳು :**1 ಆಧ್ಯಾತ್ಮ ಶಂಕರ ವಿಜಯ
2. ಶ್ರೀ ಶಾಂಕರ ದಕ್ಷಿಣಾಮ್ನಾಯ ಪೀಠ ಶೃಂಗೇರಿ.

**— ಬಿಟ್ಟೀರ ಚೋಂದಮ್ಮ ಶಂಭು**

**ಮಾತು ಆಡಿದಷ್ಟು ಮುಗಿಯದು, ಮಂಜು ಅಗೆದಷ್ಟು ತೀರದು**

# ಬೋಜಿನೂ ಕೂಸುನೂ

ಮೊನ್ನೆ ಬೋಜಿ ಒಂದ್ ಕೂಸುನ ತೆತ್ತಿಕಂಡೋ, ನಡ್ಸಿ ಕಂಡೋ ಬೆನ್ನಿಗೆ ಗುದ್ದಿಕಂಡೋ ಮದುವೆ ಮನೆಕಡೆ ಹೋಗ್ತಾ ಇತ್. ನಾನೂ ಅಲ್ಲಿಗೇ ಹೋಗ್ತಾ ಇದ್ದೆ. ಅವುಳ ಎದ್ರ ಸಿಕ್ಕಿಬುಟ್ಟೆ. ಓ ಭಾವಾ ಸೌಕ್ಯನಾಂತ ಕೇಳಿಕೂ ಕೇಳ್ತ್. ಓಹೋ ಪರೊಲೆ, ಈ ಹೆಂಗೊಳಾಂತ ಕೇಳ್ದೆ. ಅಯ್ಯೋ ನಾ ಹೆಂಗೆ ಇರ್ದು ಹೇಳಿ? ಅತ್ತ ಸಾಯದೂ ಇಲ್ಲೆ, ಇತ್ತ ಬದುಕುದೂ ಇಲ್ಲೇಂತ ಹೇಳ್ತ್. ಹಂಗೆಲ್ಲಾ ಮಾತಾಡಿಕಾಗದ್, ಅಲ್ಲಾ ನಿನ್ನ ಗಂಡ ಎಲ್ಲಿತ ಕೇಳ್ದೆ. "ಆ ಭೂತ" ಆಗಳೇ ಹೋವ್ತುಟು. ತಿಂಬಕೆ ಕುದ್ದಿದ್ದುತ ಪರಪರ ಹೇಳಿಕೆ ಸುರು ಮಾಡ್ತ್. ಬಾಕಿ ಮಕ ಎಲ್ಲಿಂತ ಕೇಳ್ದೆ ಆ ದರ್ವೇಸಿಗೆ ಮನೆಲಿ ಒಳೋಂತ ಹೇಳ್ತ್. ಓಹೋ ಏನೋ ಮಾರಾಮಾರಿ ಆಗಿರೊಕುಂತ ಕಂಡದೆ. ಇನ್ ಹೆಚ್ ಕೇಳಿರೆ ಕಚ್ಚಕೆ ಬಾದುತ ಗ್ಯಾನ ಮಾಡಿಕಂಡೆ. ಕೂಸಿಗೊಂದು ಪೆಪ್ಪಿ ತಕ್ಕೊಟ್ ನಾ ಅತ್ತ ದಾಟಿ ಬಚಾವಾದೆ.

ನಾ ಸೀದ ಮೊದುವೆ ಮನೆಗೆ ಹೋದೆ. ಹೈದ ನಂಗೆ ಕಾಗದ ಕೊಡಕನ ಗೂಡೆದೂ ಮದುವೆ ಕಾಗದನ ಕೊಟ್ಟಿತ್. ನಂಗೆ ಗೂಡೆ ಕಡೆ ಗೊತ್ತಿಲ್ಲೆ. ಹೆಂಗೂ ಇಬ್ಬರೂ ಕಾಗದ ಕೊಟ್ಟೊಳಲ್ಲಾಂತ ಇಬ್ಬರಿಗೂ ಕವರ್ ಕಟ್ಟಿದೆ. ಊಟದ ಕಡೆ ಬಗ್ಗಿದೆ. ಅಲ್ಲಿ ನೋಡಿಕೆ ಜನ ಆಗಳೇ ಊಟ ಮಾಡ್ತಾ ಒಳೊ. ಅಷ್ಟೇ ಅಲ್ಲ, ಪ್ರತಿಯೊಬ್ಬ ಊಟದವನ ಹಿಂದೆ ಒಬ್ಬೊಬ್ಬ ರೆಡಿಯಾಗಿ ನಿತ್ತೊಳೊ. ಆಗಳೇ ರಿಸರ್ವೇಸನ್ ಆಗೋವ್ತುಟು. ಪಾಪ, ಆ ಊಟ ಮಡವುಕೆ ಒಂಥರಾ ಆತಿತ್. ಯಾಕೆಂತೇಳಿರೆ ಒಬ್ಬ ಉಂಬಕನ ಇನ್ನೊಬ್ಬ ನೋಡಿ ಕಂಡೇ ನಿತ್ತರೆ ಊಟ ಹೆಂಗಾದು ಹೇಳಿ? ಹೆಂಗೂ ಬಂದೊಳೊ. ಒಂದರ್ಧ ಗಂಟೆ ಸುಧಾರಿಸಿಕಂಡರೆ ಆದುಲೆನಾ? ಕೆಲ್ಸ ಯಾಗೋಳು ಉಟ್ಟಪ್ಪ. ಹೇಳಿ ಕೇಳಿ ನಾವೆಲ್ಲಾ ಭಾರತದ ರೈತರಲ್ಲಾ?

ಅಂತೂ ಇಂತೂ ನಾಕನೇ ಪಂಕ್ತಿ(ಹಂತಿ) ಆಗಿ 5ನೇ ಪಂಕ್ತಿ ಊಟಕ್ಕೆ ಕೂರುವ ಅವಸರಲಿ ಜನ ಇದ್ದೊ. ಇನ್ನು ಎಂಜಿಲ್ ಎಲೆ ಅಲ್ಲೆ ಇತ್. ಆದರೂ ಜನ ಕುದ್ದೆ ಬುಟ್ಟೊ. ಪ್ರತೀ ಎಲೆಲೂ ಕಮ್ಮಿಂತೇಳಿರೆ ಕಾಲ್ ಕೆ.ಜಿ. ಊಟ ಬೂಟ್ಟೊಳೊ. ಒಂದ್ನೈನೂರು ಜನ ಹಿಂಗೇ ಅರ್ಧಂಬರ್ಧ ತಿಂದ್ ಊಟನ ಬುಟ್ಟರೆ ಸುಮಾರು ನೂರಿನ್ನೂರು ಕೆ.ಜಿ. ಊಟನ ಹಾಳ್ ಮಾಡ್ದಂಗೆ ತಾನೆ? ಪ್ರತೀ ಸಮಾರಂಭಲೂ ಊಟ ಹಿಂಗೆ ಹಾಳಾಗಿ ಹೋದೆ. ಊಟ ಇಕ್ಕಿಕಾಕನ ಬೇಕರೆ ಬೇಕು, ಬೇಡರೆ ಬೇಡಾಂತ ಹೇಳುಕು. ಇದ್ ಹಂಗಲ್ಲ, ನಾ ಹಣ ಕಟ್ಟೊಳೆ. ಹಾಕುದೆಲ್ಲಾ ಹಾಕಲಿಂತ ಸುಮ್ಮನೆ ಕುದ್‌ಕಂಬದು ಸರಿನಾ?

ಅದಿರ್ಲಿ, ನಾನೂ ಸೆರೆ ಮಾಡಿಕಂಡ್ ನುಗ್ಗಿ ಊಟಕ್ಕೆ ಕುದ್ ಕಂಡೆ. ಯಾಕೋ ನಾ ನನ್ನ ಎದ್ರ್ ಸಾಲ್‌ನ ನೋಡ್ದೆ. ಅಲ್ಲಿ, ದಾರಿಲಿ ಸಿಕ್ಕಿದ ಬೋಜಿನೂ ಅವುಳ ಕೂಸೂನು ಕುದ್ದೊಳೊ. ಎಲೆ ಹಾಕವು ಎಲೆ ಹಾಕಿದೊ. ಬೋಜಿಗೂ ಒಂದೆಲೆ, ಕೂಸಿಗೂ ಮತ್ತೊಂದೆಲೆ ಹಾಕಿದೊ. ನೀರ್ ಹಾಕವು ಹಾಕಿದೊ. ಊಟ ಇಕ್ಕವು ಇಕ್ಕಿಕಂಡ್ ಹೋದೊ. ಬೋಜಿ ತನ್ನ ಕೂಸುನ ಎಡಭಾಗಲಿ ಕೂರಿಸಿಕಣದೆ ಬಲಭಾಗಲಿ ಕೂರಿಸಿ ಕಂಡಿತ್. ಅವುಳಿಗೆ ಎಷ್ಟ್ ಸೊಯ ಇರ್ದ್. ತನ್ನ ಬಲಗಡೆ ಕೂರಿಸಿಕಂಡರೆ ಆ ಕೂಸುನ ಬಾಯಿಗೆ ಊಟ ಕೊಡಿಕೆ ಆದೆನಾ? ಮೂರು ಮಕ್ಕಳ ಅಯ್ಯೆಗೆ ಅಷ್ಟೂ ಗೊತ್ತಿಲೆನಾ? ಅಂತೂ ಕೂಸುನ ಬಾಯಿಗೆ ಒಂದೆರಡ್ ತುತ್ತು ತಿನ್ಸಿತ್. ಒಂದ್ ಚಕ್ಕಳ ಪೀಸ್‌ನ ಕಚ್ಚಿ ಎಳೆಕೆ ಕೂಸುನ ಕೈಗೆ ಕೊಟ್ಟತ್. ಆ ಕೂಸು ಆ ಕುರಿ ಮಾಸದ ಚಕ್ಕಳ ಪೀಸ್‌ನ ಕಚ್ಚಿ ಎಳ್ತ್. ಹಂಗೆ ಎಳೆಕಾಕನ ರಬ್ಬರ್ ಪಟ್ಟೆನ ಎಳ್ದ್ ಬುಟ್ಟಂಗೆ ಆ ಪೀಸ್ ಕೈಂದ ಬುಟ್ ಹೋತು. ತುಟಿಗೆ ಪಟ್ಟಂತ ಪೆಟ್ಟಾತ್. ಆಗ ಆ ಖಾರ ಪೂರ ಕೂಸುನ ಕಣ್ಣಿಗೆ ರಟ್ಟಿ ಆಕನ ಕೂಸು "ವಾಲಗ" ಸುರುಮಾಡ್ತ್. ಮುಂದೇ ಸಿಡಿಸಿಡೀಂತ ಆಡ್ತಾ ಇದ್ದ ಬೋಜಿ ಕೂಸುನ ಬೆನ್ನಿಗೆ ಎಡಗೈಲಿ ಗಂಯ್ಯ್‌ಂತ ಗುದ್ದಿತು. ಕೂಸಿಗೆ ಅರೆ ಹೊಟ್ಟೆ. ಅಯ್ಯೆ ಮಾತ್ರ ಸಮಾ ಉಂಡತ್. ಎಲ್ಲವೂ ಎದ್ದೊ. ಕೈತೊಳ್ದೊ.

ಬೋಜಿ ಕೂಸುನ ನಡ್ಸಿಕಂಡ್ ಹೊರ್ಟತ್. ಕೂಸು ನಡೆಕನ ಕುಂಟಿಕಂಡ್ ನಡೀತಿತ್. ಯಾಕೆ ಹಿಂಗೆತ ನೋಡಿರೆ ಒಂದ್ ಕಾಲ್‌ದ್ ಚಪ್ಪಲ್ ಬಿದ್ದೋವ್ತುಟು. ಕಣ್ಣಿಗೆ ಖಾರ ರಟ್ಟಕನ ಕಾಲ್‌ಂದ ಚಪ್ಪಲ್ ರಟ್ಟಿತ್. ಆ ಕೂಸು ಅದುರ ಹೇಳ್ತೂ ಇಲ್ಲೆ. ಇವುಳು ನೋಡ್ತೂ ಇಲ್ಲೆ. ಥೂ ಇದೆಂತಾ ಸೈತಾನ್ ಕೂಸುಂತ ಬೊಯ್ಕಂಡ್ ಊಟ ಮಾಡ್ದಲ್ಲಿಗೆ ಹೋತು. ಅಲ್ಲಿಗೆ ಹೋದರೆ ಜನ್ರ ಊಟ ಇನ್ನೂ ಆಗ್ತಾ ಇತ್. ಇನ್ ಆ ತುಮುಕ್‌ಲಿ (ನೂಕಾಟಲಿ) ಹೋದು ಬ್ಯಾಡಾಂತ ಗ್ಯಾನ ಮಾಡಿಕಂಡ್ ಹೊರಗೆಲ್ಲೊ ಒಂದ್ ಕಡೆ ನಿತ್ತತ್. ಅಷ್ಟೊತ್ತಿಗೆ ಈ ಕೂಸಿಗೆ ನಿದ್ದೆ ಬಂದಂಗಾಗಿ ತಲೆ ಮುಕುಡು ಹಾಕ್‌ತಿತ್ (ನಿದ್ದೆ ತೂಗ್‌ತಿತ್) ಕೂಸುನ ಎತ್ತಿ ಹೆಗ್‌ಲ್ ಮೇಲೆ ಮಲ್‌ಗಿಸಿಕಂಡತ್. ಕೂಸು ಒಳ್ಳ ನಿದ್ದೆ ಮಾಡ್ತ್. ಜನರ ಊಟಲ್ಲಾ ಆತ್. ಬೋಜಿ ಮೆಲ್ಲ ಬಂದ್ ಬಿದ್ ಹೋದ ಚಪ್ಪಲಿಗಾಗಿ ಹುಡ್ಕಿತ್. ಸಧ್ಯ ಅದ್ ಇವು ಊಟಕ್ಕೆ ಕುದ್ದ ಜಾಗಲಿ ಗೋಡೆಕೆಡೇಲಿತ್. ಅದರ ಹಂಗೆ ತಕ್ಕಂಡ್ ಕೈಲೇ ಹಿಡ್ಕಂಡತ್ ನಿದ್ದೆ ಬುಟ್ಟ ಮೇಲೆ ಹಾಕಿನೆಂತ ಸುಮ್ಮನಾತ್.

ಮದುವೆ ಮನೆಂದ ಸುಮಾರ್ ದೂರ ಬಂದಾಕನ ಕೂಸಿಗೆ ಎಚ್ಚರಾತ್. ಮೆಲ್ಲ ಇಳ್ಸಿತ್. ಕಾಲಿಗೆ ಚಪ್ಪಲ್ ತೋಡ್ಸಿತ್ ಹಿಂಗಿರಕನ ಕಥೆ ಬೇರೆ!! ಆ ಇನ್ನೊಂದ್ ಕಾಲ್‌ಲಿದ್ದ ಚಪ್ಪಲ್ ನಿದ್ದೆ ಮಾಡಕನ ಎಲ್ಲಿ ಬಿದ್ದೋತೋ ಏನೋ? ಥೂ ಹಾಳಾಗಿ ಹೋಗಲಿ. ಇನ್ ಅದರ ಎಲ್ಲಿ ಹುಡುಕುದು? ಅದೂ ಬ್ಯಾಡ ಇದೂ ಬ್ಯಾಡಂತ ಈ ಚಪ್ಪಲ್‌ನ ಹೆರ್ಕಿ ತೋಟದಕಡೆ ಬಿಸಾಕಿತ್.

ಬೋಜಿಗೆ ಬೆಳಿಗ್ಗೆಂದನೇ ಸಿಟ್ ಯಾಕೆ? ಯಾಕೆಂತೇಳಿರೆ ಈ ಮದುವೆ ಮನೆಗೆ ಬಾಕನ ಹಾಕಂಡದ್ ಮೂರು ಎಳೆ ಚಿನ್ನದ ಚೈನ್. ಎರಡೆಳೆ ಚೈನ್‌ನ ಬ್ಯಾಂಕ್‌ಂದ ಇನ್ನು ಬುಡ್ಸಿಕಂಡತ್‌ಲೆ.

ಬಿ. ಆರ್. ಜೊಯಪ್ಪ. ಮದೆ

---

## ನಗೆ ಹನಿ

ಸರ್ : ಲೋ ಹರಿ ನೆನ್ನೆ ಏಕೆ ರಾ ಶಾಲೆಗೆ ಬಾತ್‌ಲೇ

ಹರಿ : ನಮ್ಮಜ್ಜಿ ಸತೋತ್ ಸರ್

ಸರ್ : ಹೋದ ವಾರ ತಾನೇ ನಿಮ್ಮಜ್ಜಿ ಸತ್ತೋತ್ ತಾ ರಜೆ ಹಾಕಿದಲ್ಲಾ

ಹರಿ : ನಮ್ಮಜ್ಜಂಗೆ ಎರಡು ಹೆಣ್ಣು ಸರ್

ಬಾಳೆಕಜೆ ತೀರ್ಥಪ್ರಸಾದ್, ಸಂಪಾಜೆ

---

ಹೆಣ್ಣು ಒಲಿದರೆ ನಾರಿ, ಮುನಿದರೆ ಮಾರಿ




✦ ಕೌಂಡಿನ್ಯ : ಧಾರವಾಹಿ -30

ಸಂಪಿಗೆಪುರದ ಮಹಾ ಹುತ್ತ !

ಸುದ್ದಿ ತಿಳಿದೊಡನೆ ಜನಗಳು ಗುಂಪು, ಗುಂಪಾಗಿ ಬರುತ್ತಿದ್ದಾರೆ. ಹೊಸದೇನೂ ಇಲ್ಲ. ಹಿಂದೆ ನೋಡಿರುವುದೇ !

ಈಗ ಕುತೂಹಲ ಇಲ್ಲ !

ಭಯ...... ವಿಪರೀತ ಭಯ !

ಜನರ ಭಯಕ್ಕೆ ಕಾರಣ ಇದೆ. ಕೆಲವೇ ದಿನಗಳಲ್ಲಿ ಇದು ಆ ಹಳ್ಳಿಯಲ್ಲಿ ನಡೆಯುತ್ತಿರುವ ನಾಲ್ಕನೆಯ ದುರಂತ !

ಹಳ್ಳಿಯ ಬಹುಮಂದಿಯ ಅಭಿಪ್ರಾಯ !

ಎಡತೊರೆಯ ಶ್ರೀಮಂತರ ಮನೆತನಕ್ಕೆ ನಾಗರ ನಂಜು ತಟ್ಟಿದೆ. ಅದಕ್ಕೆ ಈ ಭಯಾನಕ ಸಾವು !

ರೇವತಿ, ಪ್ರಸನ್ನ, ಗಾಬರಿ ಆತುರದಿಂದ ಅಲ್ಲಿಗೆ ಬಂದರು. ಎದೆ ನಡುಗಿಸುವ ದೃಶ್ಯ !

ರೇವತಿ ಪರಿಶೀಲಿಸುತ್ತಿದ್ದಾಳೆ !

ಪ್ರಸನ್ನ ಮಂಕು ಬಡಿದವರಂತೆ ನಿಂತಿದ್ದಾನೆ. ಅದೇ ಸಮಯಕ್ಕೆ ಅಲ್ಲಿಗೆ ಪೋಲಿಸ್ ಜೀಪ್ ಸಹ ಬಂದಿತು.

ಜನಗಳು ಭಯದಿಂದ ದೂರ ಸರಿದರು.

ಇದೇನು ಕೊಲೆ ಅಲ್ಲ !

ಹಾಗಂತ ಯಾರು ಸಹ ಪೋನ್ ಮಾಡಿರಲಿಲ್ಲ. ಆದರೆ ಹಿಂದಿನ ರಾತ್ರಿ ಲಿಂಗಯ್ಯ ಮನೆಯಿಂದ ಅನುಮಾನಾಸ್ಪದ ರೀತಿಯಲ್ಲಿ ಹೊರಗೆ ಹೋಗಿದ್ದನು.

ಬಹುಶಃ ಕಿಡ್ನಾಪ್ ಇರಬೇಕು !

ಅರೆಹುಚ್ಚನನ್ನು ಯಾರೋ ಇಲ್ಲಿಗೆ ಎತ್ತಿಕೊಂಡು ಬಂದು....... ಎತ್ತಿಕೊಂಡು ಬಂದು......?

ಆಲೋಚನೆ ಮುಂದುವರೆಯಲಿಲ್ಲ !

ಎತ್ತಿಕೊಂಡು ಬಂದು ಏನು ಮಾಡಿದ್ರು? ಏನಾದರೂ ಮಾಡಲು ಇದೇನು ಮನುಷ್ಯರ ಕಾರ್ಯ ಅಲ್ಲವಲ್ಲ !

ಹತ್ತಾರು ವಿಷ ಸರ್ಪಗಳು ಲಿಂಗಯ್ಯನ ದೇಹಕ್ಕೆ ಬಿಗಿಯಾಗಿ ಸುತ್ತಿಕೊಂಡಿದೆ. ಅವನ ದೇಹ ಕೊರಡಿನಂತೆ ಬಿದ್ದು ಕೊಂಡಿದೆ.

ಪೋಲಿಸ್ ಅಧಿಕಾರಿಗಳು ತನಿಖೆಯನ್ನು ನಡೆಸುತ್ತಿದ್ದಾರೆ. ಹಾವಿನ ಬಗ್ಗೆ ಅಲ್ಲ !

ಲಿಂಗಯ್ಯನ ಬಗ್ಗೆ ಅಲ್ಲ !

ಅವನು ಇಲ್ಲಿಗೆ ಹೇಗೆ ಬಂದ? ಯಾವಾಗ ಬಂದ? ಅವನನ್ನು ಯಾರಾದರು ಕರೆದುಕೊಂಡು ಬಂದರೆ?

ಈ ಪ್ರಕರಣ ನಡೆದಿರುವುದು ಹಗಲಿನಲ್ಲಿ !

ಅಂದ ಮೇಲೆ ರಸ್ತೆಯಲ್ಲಿ ತಿರುಗಾಡುವ ಜನಗಳಿಗೆ ಏನಾದರೂ ಕಂಡಿರಬಹುದೆ ಎಂಬ ಸಂದೇಹ !

ಆ ಜನಗಳ ಗುಂಪಿನಲ್ಲಿ ಶ್ರೀಕಂಠ, ಅಜ್ಜಿ ಮತ್ತು ದೇವಸ್ಥಾನದ ಪೂಜಾರಿ ಸಹ ಇದ್ದರು.

ಗುಂಪಿನಿಂದ ಒಬ್ಬ ಮಧ್ಯ ವಯಸ್ಸಿನ ವ್ಯಕ್ತಿ "ಸಾರ್...... ನಾನು...... ನಾನು ಅದನ್ನು ನೋಡಿದೆ".

ಜನಗಳು ಕುತೂಹಲಗೊಂಡರು.

ರೇವತಿ ಜಾಗೃತಳಾದಳು.

ಆ ಗುಂಪಿನಲ್ಲಿದ್ದ ಒಬ್ಬ ವ್ಯಕ್ತಿಯ ಮುಖ ಭಯ, ಗಾಬರಿಯಿಂದ ಬಿಳುಚಿ ಕೊಂಡಿತು. ಸಣ್ಣಗೆ ನಡುಕ !

ಪೋಲಿಸ್ ಅಧಿಕಾರಿ "ನೀನೇನು ನೋಡಿದೆ"

"ಯಾರೋ ಒಬ್ಬ ಲಿಂಗಯ್ಯನವರನ್ನು ಭುಜದ ಮೇಲೆ ಹಾಕಿಕೊಂಡು ಬಂದು ಹುತ್ತದ ಹತ್ತಿರ ಮಲಗಿಸಿದ"

ಪ್ರಸನ್ನ ಬೆಚ್ಚಿ ಬಿದ್ದನು !

"ಯಾರು...... ಯಾರದು?"

"ಯಾರು ಅಂತ ಗೊತ್ತಾಗಲಿಲ್ಲ !"

"ನೀನು ಎಲ್ಲಿದ್ದೆ?"

"ಹೊಲದ ಬದುವಿನ ಮೇಲೆ"

"ಅವನ ಬಗ್ಗೆ ಚಹರೆ ಹೇಳಲು ಸಾಧ್ಯವೆ?"

"ಅವನು ದೇಹದ ತುಂಬಾ ಕಂಬಳಿಯನ್ನು ಸುತ್ತಿಕೊಂಡಿದ್ದ. ಹಾಗಾಗಿ ಅವನನ್ನು ಗುರುತಿಸಲು ಆಗಲಿಲ್ಲ"

ಗುಂಪಿನಿಂದ ಹೊರ ಬಂದ ನಿಟ್ಟುಸಿರು !

ಪೋಲಿಸ್ ಅಧಿಕಾರಿ "ಅವನೇನು ಮಾಡಿದ ಅಂತ ಗೊತ್ತೆ?"

ಆ ವ್ಯಕ್ತಿ "ಲಿಂಗಯ್ಯನನ್ನು ನೆಲದ ಮೇಲೆ ಮಲಗಿಸಿದ. ಮಂಡಿಯೂರಿ ಕುಳಿತುಕೊಂಡಿದ್ದ, ಅದು ಏನು ಮಾಡಿದ ಅಂತ ಗೊತ್ತಾಗಲಿಲ್ಲ"

"ಹಾಗೆ ಎಷ್ಟು ಹೊತ್ತು ಕುಳಿತ್ತಿದ್ದ?"

"ಒಂದೆರಡು ನಿಮಿಷ ಇರಬೇಕು"

"ಆಮೇಲೆ ಏನು ಮಾಡಿದ?"

"ಕುಳಿತ್ತಿದ್ದವನು ಎದ್ದು ದಡದಡನೆ ಓಡಿಹೋದ. ನನಗೆ ಅನುಮಾನ ಬಂದು ಹತ್ತಿರ ಬಂದೆ."

"ಅಲ್ಲಿ ನೀನು ಏನುಕಂಡೆ?"

"ಹುತ್ತದಿಂದ ಹಾವುಗಳು ಸರಸರನೆ ಹರಿದು ಬರುತ್ತಿತ್ತು. ನಾನು ಪ್ರಾಣ ಭಯದಿಂದ ಓಡಿ ಬಂದೆ"

ಪೋಲಿಸ್ ಅಧಿಕಾರಿ ಈಗ ಪ್ರಸನ್ನನ ಕಡೆ ತಿರುಗಿ "ನಿನ್ನೆ ರಾತ್ರಿ ನಿಮ್ಮ ಅಣ್ಣ ಲಿಂಗಯ್ಯನನ್ನು ಯಾರೋ ಅಪಹರಿಸಿ ಕೊಂಡು ಬಂದಿದ್ದಾರೆ ಪ್ರಸನ್ನ"

ಪ್ರಸನ್ನ ಭಯ ಗಾಬರಿಯಿಂದಲೇ "ನನಗೆ.... ನನಗೆ ನಂಬಿಕೆಯೇ ಬರುತ್ತಿಲ್ಲ. ಅಣ್ಣನಂತಹ ವ್ಯಕ್ತಿಯನ್ನು ಬಂಗಲೆಯಿಂದ

20ನೇ ಪುಟಕ್ಕೆ

ಇಲ್ಲಿಯವರೆಗೆ.........

ಎಡತೊರೆ ಬಂಗಲೆಯಲ್ಲಿ ಅರೆಹುಚ್ಚ ಲಿಂಗಯ್ಯ ನಿಗೂಢ ರೀತಿಯಲ್ಲಿ ಕಣ್ಮರೆಯಾಗಿರುತ್ತಾನೆ. ಪೋಲಿಸರು ಬಂದು ತನಿಖೆಯನ್ನು ನಡೆಸುತ್ತಾರೆ. ಬೆಳಗಿನ ಹತ್ತು ಗಂಟೆಯ ಸಮಯದಲ್ಲಿ ದುರಂತದ ಬಗ್ಗೆ ಸುದ್ದಿ ಹರಡುತ್ತದೆ.

ಮುಂದೆ ಓದಿ.........

# ಬಗರ್ ಹುಕುಂ ಸಾಗುವಳಿ ಜಮೀನಿನ ಮೇಲೆ ಅಧಿಕ ಟಿ. ಟಿ. ದಂಡ ವಸೂಲಿ

ಕರ್ನಾಟಕದ ಭೂಪಟದಲ್ಲಿ ಕೊಡಗು ಜಿಲ್ಲೆ ವಿಶೇಷ ಸ್ಥಾನ ಗಳಿಸಿದೆ. ಕಾಫಿಯೇ ಇಲ್ಲಿನ ಪ್ರಮುಖ ಬೆಳೆಯಾದರೂ ಖುಷ್ಕಿ ಸೇರಿದಂತೆ ಇತರೆ ಎಲ್ಲಾ ವ್ಯವಸಾಯವನ್ನು ಇಲ್ಲಿನ ರೈತರು ಮಾಡುತ್ತಿದ್ದಾರೆ.

ಕೊಡಗು ಜಿಲ್ಲೆಯ ಮೂರು ತಾಲೂಕುಗಳಲ್ಲಿಯೂ ಅನಧಿಕೃತ ಪೈಸಾರಿ ಜಾಗದಲ್ಲಿ ಅದೆಷ್ಟೋ ರೈತರು, ಕೂಲಿ ಕಾರ್ಮಿಕರು, ಪ. ಜಾತಿ -ಪಂಗಡದವರು ಜಾಗವನ್ನು ಒತ್ತುವರಿ ಮಾಡಿಕೊಂಡು ವ್ಯವಸಾಯ ಮಡುತ್ತಿದ್ದಾರೆ. ಈ ರೀತಿ ಒತ್ತುವರಿ ಮಾಡಿಕೊಂಡ ಜಮೀನಿಗೆ ತಾಲೂಕು ಕಂದಾಯ ಇಲಾಖೆ ಟಿ.ಟಿ. ದಂಡವನ್ನು ವಿಧಿಸುತ್ತಾರೆ. ಜಮೀನುಗಳು ಸಕ್ರಮಗೊಳ್ಳುವವರೆಗೂ ಸರ್ಕಾರದ ನಿರ್ದೇಶನದಂತೆ ಈ ದಂಡ ಹಾಗೂ ದ್ವಿಕಂದಾಯ ವಿಧಿಸಬೇಕಾತ್ತದೆ. ಆದರೆ, ಟಿ.ಟಿ. ದಂಡ ವಿಧಿಸುವಾಗ ಸೋಮವಾರ ಪೇಟೆ ತಾಲೂಕು ತಹಶೀಲ್ದಾರ್ ಅವರು ಬೇಕಾಬಿಟ್ಟಿ ಟಿ.ಟಿ. ದಂಡ ವಿಧಿಸುತ್ತಿರುವದರಿಂದ ಈ ವಿಭಾಗದ ರೈತಾಪಿವರ್ಗ ಕಂಗಾಲಾಗಿ ರುವ ಕುರಿತು 'ಶಕ್ತಿ" ನಡೆಸಿದ ತನಿಖಾ ವರದಿಯಿಂದ ಗೊತ್ತಾಗಿದೆ. ಅಕ್ರಮ ಜಾಗವನ್ನು ಸಕ್ರಮಗೊಳಿಸುವ ಅರ್ಜಿಯನ್ನು ಕಳೆದ 10ವರ್ಷ ಗಳಿಗಿಂತಲೂ ಹಿಂದೆ ನೀಡಿದ್ದರೂ ಇದುವರೆಗೂ ಸರ್ಕಾರ ಸಕ್ರಮಗೊಳಿಸದೇ ಇರುವದೂ ಪರಿಸ್ಥಿತಿ ಉಲ್ಬಣವಾಗ್ಗಲು ಕಾರಣವಾಗಿದೆ.

ಸರ್ಕಾರದ ಆದೇಶದ ಪ್ರಕಾರ (ನಂ. ಆರ್‌ಡಿ 29 ಯುಎಲ್‌ಜಿಪಿ 94-17-5-1994) ಒತ್ತವರಿದಾರರ ಆರ್ಥಿಕ ಪರಿಸ್ಥಿತಿಯನ್ನು ನೋಡಿಕೊಂಡು ಸಂಬಂಧಪಟ್ಟ ತಹಶೀಲ್ದಾರ್ ಅವರು ಅತ್ಯಲ್ಪ ಅಂದರೆ ಜಮೀನುಗಳಿಗೆ ವರ್ಷಒಂದಕ್ಕೆ ಎಕರೆಗೆ ಪ.ಜಾತಿ-ಪಂಗಡದವರಿಗೆ ರೂ.10ರಂತೆ ಹಾಗೂ ಇತರೆ ವರ್ಗದವರಿಗೆ ರೂ. 25ರಂತೆ (ರೈತರು ಹೊಂದಿರುವ ಖುಷ್ಕಿ ಅಥವಾ ಕಾಫಿ ವ್ಯವಸಾಯ ಮಾಡಿ ಜಮೀನು ಮತ್ತು ಇತರೆ ಜಮೀನು ಸೇರಿ ಐದು ಎಕರೆಗೆ ಹೆಚ್ಚಿಗೆ ಇರಬಾರದು) ವಿಧಿಸಬೇಕೆಂದು ಸೂಚಿಸಿದೆ.

(ಕಂದಾಯ ಇಲಾಖಾ ಕಾರ್ಯದರ್ಶಿ ಆದೇಶ ಸಂಖ್ಯೆ ಆರ್‌ಡಿ 29ಎಲ್‌ಜಿಪಿ94 ದಿ. 7-8-1995) ಅಲ್ಲದೆ, ಈಗಾಗಲೇ ನಿರ್ಧಾರವಾಗಿರುವ ಮತ್ತು ಟಿ.ಟಿ. ದಂಡವನ್ನು ವಿಧಿಸಲಾಗಿರುವ ಅಂತಹ ಪ್ರಕರಣಗಳಲ್ಲಿ ಟಿ.ಟಿ. ದಂಡವನ್ನು ಕಟ್ಟದೇ ಇರುವ ಸಂದರ್ಭ ಸಂಬಂಧಪಟ್ಟ ತಹಶೀಲ್ದಾರ್ ಅವರು ಮತ್ತೊಮ್ಮೆ ಕಡಿಮೆ ಮಾಡುವ ಬಗ್ಗೆ ಪರಿಶೀಲಿಸಿ ಪರಿಗಣಿಸತಕ್ಕದ್ದೆಂದು ಸೂಚಿಸಲಾಗಿದ್ದರೂ, ಸರ್ಕಾರದ ಈ ಎಲ್ಲ ಆದೇಶಗಳನ್ನು ನಿರ್ದಾಕ್ಷಿಣ್ಯವಾಗಿ ಗಾಳಿಗೆ ತೂರಿರುವದು ಕಂಡು ಬಂದಿದೆ.

ಒತ್ತುವರಿ ಜಾಗದಲ್ಲಿ ಕೃಷಿದಾರರಿಗೆ ಸರ್ಕಾರದ ನಿರ್ದೇಶನದ ಹತ್ತು ಪಟ್ಟು ಅಂದರೆ ರೂ. 150ನ್ನು ಕಡ್ಡಾಯವಾಗಿ ವಸೂಲಿ ಮಾಡಲಾಗುತ್ತಿದೆ.

ಕಾಫಿ ಒತ್ತುವರಿದಾರ ರೈತರಿಂದ ಒಂದು ಎಕರೆಗೆ ರೂ. 562.75 ಪೈಸೆಗಳನ್ನು ವಸೂಲಿ ಮಾಡಲಾಗುತ್ತಿದೆ. ಇದರಿಂದ ರೈತಾಪಿ ವರ್ಗ ಕಂಗಾಲಾಗಿದೆ.

ಈ ರೀತಿ ಟಿ.ಟಿ. ದಂಡದ ಮುಖಾಂತರ ಬಡ ಕೃಷಿಕರ ಹೊಟ್ಟೆ ಮೇಲೆ ಕಲ್ಲು ಹಾಕುವ ಮುಖೇನ ಕೋಟಿಗಟ್ಟಲೆ ಹಣ ವಸೂಲಿ ಮಾಡುತ್ತಿರುವದು ದುರ ದೃಷ್ಟಕರವಾಗಿದೆ. ಈ ಕುರಿತು ಸೋಮವಾರ ಪೇಟೆ ತಾಲೂಕು ಬಗರ್‌ಹುಕುಂ ಒತ್ತುವರಿದಾರರು ಹಾಗೂ ತಾಲೂಕು ಸಣ್ಣ ಕಾಫಿ ಬೆಳೆಗಾರರ ಸಂಘವು ಕೊಡಗು ಜಿಲ್ಲಾಧಿಕಾರಿಯವರಿಗೆ ತಾ. 30-4-99 ರಂದು ಮನವಿ ಮಾಡಿ ಬಗರ್‌ಹುಕುಂ ಸಾಗುವಳಿದಾರರಿಗೆ ವಿಧಿಸಿರುವ ಹೆಚ್ಚುವರಿ ಟಿ.ಟಿ. ದಂಡವನ್ನು ಮನ್ನಾ ಮಾಡಿ ಇಮ್ಮಡಿ ಕಂದಾಯ ಹಾಗೂ ಸೆಸ್‌ನ್ನು ಮಾತ್ರ ವಸೂಲಿ ಮಾಡುವಂತೆ ಕೋರಿರುವದನ್ನು ಕೊಡಗು ಜಿಲ್ಲಾಧಿಕಾರಿಗಳು ಪರಿಗಣಿಸಿ ತಾ. 22.-10-99ರಂದು ತಾಲೂಕು ತಹಶೀಲ್ದಾರ್‌ರವರಿಗೆ 'ಮೆಮೋ' ನೀಡಿ ಅರ್ಜಿದಾರರ ಮನವಿಯನ್ನು ಪರಿಗಣಿಸಿ ನಿಯಮಾನುಸಾರ ಕ್ರಮ ಕೈಗೊಳ್ಳುವಂತೆ ಸೂಚಿಸಿ ತಮ್ಮ ಕಚೇರಿಯ ಪತ್ರಸಂಖ್ಯೆ ಎನ್‌ಸಿಆರ್5:99-2000 ದಿನಾಂಕ 4-6-99ರ ನಿರ್ದೇಶನವನ್ನು ಪಾಲಿಸುವಂತೆ ಆದೇಶಿಸಿದ್ದಾರೆ.

**ಆದೇಶದ ವಿವರ**

ಬಗರ್‌ಹುಕುಂ ಸಾಗುವಳಿಯನ್ನು ಸಕ್ರಮಗೊಳಿಸುವ ಯೋಜನೆಯಡಿ ಅಕ್ರಮ ಸಾಗುವಳಿ ಮಾಡಿದ ಬಡಜನರು ಗರಿಷ್ಠ ದಂಡ ಪಾವತಿಸಲು ಅಶಕ್ತರಾಗಿರುವದರಿಂದ ಗರಿಷ್ಠ ಟಿ.ಟಿ. ದಂಡವನ್ನು ಅನೇಕ ವರ್ಷಗಳವರೆಗೆ ಕಟ್ಟದೇ ಇರುವ ಪ್ರಕರಣಗಳು ಇರುತ್ತವೆ. ಈ ರೀತಿ ವಿಧಿಸಲಾದ ದಂಡವನ್ನು ಕಡಿಮೆ ಮಾಡುವ ಹಾಗೂ ಮನ್ನಾ ಮಾಡುವಂತೆ ಸಾರ್ವಜನಿಕರಿಂದ ಅಹವಾಲುಗಳು ಬರುತ್ತಿವೆ. ಈ ಕುರಿತು ಸರ್ಕಾರ ಸೂಕ್ತ ನಿರ್ದೇಶನ, ಸ್ಪಷ್ಟನೆ ನೀಡಿ ದ್ದರೂ ತಹಶೀಲ್ದಾರ್‌ಗಳು, ಉಪ ತಹಶೀಲ್ದಾರ್‌ಗಳು ವಸ್ತುಸ್ಥಿತಿ ಅರಿಯದೆ ಮನಸ್ಸಿಗೆ ಬಂದಂತೆ ಟಿ.ಟಿ. ದಂಡ ವಿಧಿಸದೇ ಭೂ ಕಂದಾಯ ಅಧಿನಿಯಮ ಕಲಂ 94ರ ರೀತ್ಯ ದತ್ತವಾಗಿರುವ ವಿವೇಚನಾ ಅಧಿಕಾರವನ್ನು ಸರಿಯಾದ ರೀತಿಯಲ್ಲಿ ಚಲಾಯಿಸುವಂತೆ ಜಿಲ್ಲಾಧಿಕಾರಿ ಸೂಚಿಸಿದ್ದಾರೆ.

ಸೋಮವಾರಪೇಟೆ ತಾಲೂಕಿನ ಸರಹದ್ದಿನಲ್ಲಿ ಸುಮಾರು 50 ಎಕರೆ ಹಾಗೂ ವೀರಾಜಪೇಟೆ ತಾಲೂಕಿನ ಕೆದಮೊಳ್ಳೂರು (ತೋರ) ವಿ. ಬಾಡಗ, ವೆಸ್ಟ್‌ನೆಮ್ಮಲೆ, ಬೀರುಗ, ಮಡಿಕೇರಿ ತಾಲೂಕಿನ ಸರಹದ್ದಿನಲ್ಲೂ ಒತ್ತುವರಿಯಾದ ಕುರಿತು ಪತ್ರಿಕೆಗಳಲ್ಲಿ ಈಗಾಗಲೇ ವರದಿ ಬಂದಿದೆ.

ಈ ವರದಿಗಳನ್ನು ಜಿಲ್ಲಾಧಿಕಾರಿಗಳು ಗಮನಿಸಿ ಮೂರೂ ತಾಲೂಕುಗಳ ತಹಶೀಲ್ದಾರ್‌ರವರಿಗೂ ಖಾರವಾದ ಸುತ್ತೋಲೆ ಹೊರಡಿಸಿದ್ದರೂ ಅದೆಲ್ಲಾ ಕಸದ ಬುಟ್ಟಿಗೆ ಸೇರಿರುವದು ಕಂಡು ಬಂದಿದೆ. ಸೋಮವಾರಪೇಟೆ ತಾಲೂಕಿನಲ್ಲಿ ಒತ್ತುವರಿ ಕಡತಗಳನ್ನು ಪರಿಶೀಲಿಸದೇ ಹೋಬಳಿ ನಿರೀಕ್ಷಕರ ಕಚೇರಿಯ ರಿಜಿಸ್ಟರ್‌ಗಳಲ್ಲಿ ಒಟ್ಟಾಗಿ ಟಿ.ಟಿ. ದಂಡವನ್ನು ವಿಧಿಸಲಾಗಿದೆ.

'ದೇಶದ ಬೆನ್ನೆಲುಬು' ಎಂದು ಕರೆಯಲ್ಪಡುವ ರೈತರು ಬದುಕಿದರೆ ಎಲ್ಲರೂ ಬದುಕಿದಂತೆ ಎಂಬ ಭಾವನೆಯಡಿ ಕಂದಾಯ ಇಲಾಖೆ ಕೆಲಸ ಮಾಡಬೇಕಾಗಿದೆ. ಈ ವಿಚಾರದಲ್ಲಿ ಮತ್ತೊಮ್ಮೆ ಜಿಲ್ಲಾಧಿಕಾರಿಗಳ ಹಸ್ತಕ್ಷೇಪ ಅಗತ್ಯ. 'ಅಕ್ರಮ ಸಕ್ರಮ'ಸಮಿತಿಯ ಅಧ್ಯಕ್ಷರೂ ಆಗಿರುವ ಶಾಸಕ ಅಪ್ಪಚ್ಚುರಂಜನ್ ಅವರ ಪ್ರಾಮಾಣಿಕ ಪ್ರಯತ್ನವೂ ಅಗತ್ಯ.

**ಕೃಪೆ : ಶಕ್ತಿ**

---

ಆಳು ಮಾಡಿದ್ದು ಹಾಳು, ಮಗ ಮಾಡಿದ್ದು ಮಧ್ಯಮ, ತಾನು ಮಾಡಿದ್ದೇ ಉತ್ತಮ

# ವಿಜೃಂಭಣೆಯಿಂದ ಜರುಗಿದ ಹಾಕತ್ತೂರಿನ ಊರ ಹಬ್ಬ

ಪ್ರತಿವರ್ಷದಂತೆಯೇ ಈ ವರ್ಷವು ಕೂಡ ಹಾಕತ್ತೂರಿನ ಶ್ರೀ ಭಗವತಿ ದೇವಸ್ಥಾನದ ಹಬ್ಬವು ಬಹಳ ವಿಜೃಂಭಣೆಯಿಂದ ಜರುಗಿತು. ಈ ಹಬ್ಬವು ಏಪ್ರಿಲ್ 1ನೇ ತಾರೀಕಿನಿಂದ ಪ್ರಾರಂಭ ವಾಗಿ 6ನೇ ತಾರೀಕಿಗೆ ಕೊನೆಗೊಳ್ಳುತ್ತದೆ. ಈ ಹಬ್ಬಕ್ಕೆ ಬಹಳ ಹಿಂದಿನ ಇತಿಹಾಸವಿದೆ. ಈ ಹಬ್ಬವನ್ನು ಮುಖ್ಯವಾಗಿ ಕೊಡವರು ಹಾಗೂ ಗೌಡರು ಜೊತೆಸೇರಿ ನಡೆಸುತ್ತಾರೆ. ಇಲ್ಲಿ ನಾಲ್ಕು ಮುಖ್ಯ ವಾದ ಪಂಗಡಗಳಿವೆ. (ಅಮ್ಮಟ್ಟ ಪಾಡೆಯ, ಮೂಲೆ, ಮುಕ್ಕಟಿ.) ಅಮ್ಮಟ್ಟ ಎಂದರೆ ಅಮ್ಮಟಂಡ ಮನೆತನದವರು, ಇವರಲ್ಲಿ ಕೆಳಗಿನ ಅಮ್ಮಟಂಡ ಮೇಲಿನ ಅಮ್ಮಟಂಡ ಎಂಬ 2 ಮನೆ ಇದೆ. ಇವರು ಕೊಡವರು. ಪಾಡೆಯ, ಇವರು ಪಾಡೆಯನ ಮನೆಯವರು (ಮಾಯಾಟಿಮನೆ) 3ನೇ ಯದಾಗಿ ಮೂಲೆ, ಇವರು ಅಕ್ಕಾರಿ. ಬಲ್ಯಾಟನ, ಕುಂಠಿಕಾನ ಮನೆತನದವರು. ನಾಲ್ಕನೆಯದಾಗಿ ಮುಕ್ಕಾಟಿ ಮನೆಯವರು ಹೀಗೆ ನಾಲ್ಕು ಪಂಗಡಗಳಿವೆ. ಇವರು ಮುಖ್ಯ ತಕ್ಕರು. ಅಂದರೆ ನಾಲ್ಕು ಕಡೆಯಿಂದ ಒಬ್ಬೊಬ್ಬ ಮುಖ್ಯಸ್ಥರು ಬೇಕು ಇವರಿಗೆ ಥಕ್ಕರೆನ್ನುತ್ತಾರೆ. ಮೊದಲಾಗಿ ದೇವಸ್ಥಾನದಲ್ಲಿ ಅವರವರ ಪಾಲಿಗೆ ಬರುವಂತಹ ಸ್ಥಳವನ್ನು ಎಲ್ಲರು ಸ್ವಚ್ಛಮಾಡಬೇಕು. ಯಾರ್ಯಾರಿಗೆ ಎಷ್ಟೆಷ್ಟು ಭೂಮಿ ತೋಟವಿದೆ ಇಷ್ಟಷ್ಟು ಪಾಲು ಅವರು ದೇವಸ್ಥಾನಕ್ಕೆ ದವಸಧಾನ್ಯ ಗಳನ್ನು ಕೊಡಬೇಕು. ತೆರಿಗೆ ಹಣ ಕೊಡಬೇಕು. ಆನಂತರ ಮುಂದೆ ಹಬ್ಬದ ವಾತಾವರಣ ಚೆನ್ನಾಗಿ ಮೂಡಿಬರುತ್ತದೆ. ಹಬ್ಬದ ಮೊದಲ ದಿನ ಚೌಂಡಿಕೂಠದಲ್ಲಿ ಕಾಯಿಕೀಳುವ ಆಟವಿದೆ. ಇದು ತೆಂಗಿನ ಕಾಯಿಯ ಕೀಳಾಟ ಇದು ಬಹಳ ತುಂಬಾ ತಮಾಷೆಯಾಗಿ ರುತ್ತದೆ. ಅನಂತರ ದೇವಸ್ಥಾನದಲ್ಲಿ ರಾತ್ರಿ ಚಂಡೆಯ ಶಬ್ದ ಕೇಳು ತ್ತದೆ. ಇಲ್ಲಿ ಅದಕ್ಕಾಗಿ ತಂತ್ರಿಗಳನ್ನು ಹಾಗೂ ಮಾರಾಯರನ್ನು ಕರೆಸಿರುತ್ತಾರೆ. ಮೊದಲ ರಾತ್ರಿ 1ಸುತ್ತು ಪ್ರದಕ್ಷಿಣೆಯನ್ನು ಹಾಕುತ್ತಾರೆ. ಮಾರನೆದಿನ ಕೊಡವರು ಹಾಗೂ ಗೌಡರು ದುಡಿಪಾಟ್‌ನೊಂದಿಗೆ ಚೌಂಡಿಕೂಟಕ್ಕೆ ತೆರಳುತ್ತಾರೆ. ಅಲ್ಲಿಂದ ಚೌಂಡಿಯ ಮುಖವಾಡ(ಮೊಗ ಎನ್ನುತ್ತಾರೆ) ಇದು ಪಂಚಲೋಹ ದಿಂದ ಕೂಡಿರುತ್ತದೆ. ಸುಮಾರು 5kg ಯ ತೂಕವಿರುತ್ತದೆ. ಅದನ್ನು ಎತ್ತಿಕೊಂಡು ದುಡಿ ಕೊಟ್ಟಿಕೊಂಡು ಹಾಡುತ್ತಾ ಊರಿನ ಅಂಬಾಲಕ್ಕೆ ತೆಗೆದುಕೊಂಡು ಬಂದು ಪೂಜೆ ಪುರಸ್ಕಾರದೊಂದಿಗೆ ತಂದಿಡುತ್ತಾರೆ. ಆ ದಿನ ರಾತ್ರಿ ದೇವಸ್ಥಾನದಲ್ಲಿ 3 ಸುತ್ತು ಪ್ರದಕ್ಷಿಣೆ ಯನ್ನು ಚಂಡೆಯೊಂದಿಗೆ ದೇವರ ಬಲಿ ಬರುತ್ತದೆ. ಮತ್ತೆ ಮಾರನೇ ದಿನ ಬೆಳಿಗ್ಗೆ ಕೂಡ ದೇವರ ಬಲಿ ಇದೆ. ಮತ್ತೆ ಅದೇ ರಾತ್ರಿ 7 ಸುತ್ತು ದೇವರ ಪ್ರದಕ್ಷಿಣೆಯಿದೆ ಅದು ಆದ ನಂತರ ಅದೇ ರಾತ್ರಿ ಅಂಬಾಲದಲ್ಲಿ ತೋತ ಎಂಬ ತೆರೆಯನ್ನು ಮಲಿಯರು ಕಟ್ಟುತ್ತಾರೆ. ಇದಾದ ಮಾರನೆ ದಿನ 4ನೇ ತಾರೀಕಿಗೆ ದೊಡ್ಡ ಹಬ್ಬ. ಇದು ದೇವಸ್ಥಾನದಲ್ಲಿ. ಅಲ್ಲಿ ದೇವರ 7 ಸುತ್ತು ಪ್ರದಕ್ಷಿಣೆಯಿದೆ. ದೇವರ ವಿಗ್ರಹವನ್ನು ಪೂಜಾರಿ ತಲೆಯ ಮೇಲೆ ಇಟ್ಟು ಕೊಂಡು ಮೈ ಮೇಲೆ ದೇವರು ಬಂದು ತುಳ್ಳಟ್ ನೃತ್ಯವನ್ನು ಅಲ್ಲಿ ನಾವು ನೋಡುತ್ತೇವೆ. ಇನ್ನೊಂದು ಕಡೆ ತಿರಳಗಾರನ ಕುಣಿತ ಇದೆಲ್ಲ ನೋಡಲು ತುಂಬಾ ಚೆನ್ನಾಗಿರುತ್ತದೆ. ನಿಜವಾದ ದೇವರ ಮಹಿಮೆಯನ್ನು ನಾವು ಅಲ್ಲಿ ಕಾಣುತ್ತೇವೆ. ಇಲ್ಲಿ ಬಹಳಷ್ಟು ಜನರು ಸೇರುತ್ತಾರೆ. ಅದು ಕಳೆದು ಅದೇ ರಾತ್ರಿ ಅಂಬಾಲದಲ್ಲಿ ತೆರೆ ಹಾಗೂ ಮೇಲೇರಿಗೆ ಬೆಂಕಿ ಇಡುತ್ತಾರೆ. ಬಹಳಷ್ಟು ಸೌದೆಯ ರಾಶಿಯೇ ಬಿದ್ದಿರುತ್ತದೆ. ಇದು ಎಲ್ಲ ಕುಟುಂಬದವರು ಈ ಮೇಲೇರಿ ಕುಂತೆಯನ್ನು ಹಾಕಬೇಕು. ಆ ರಾತ್ರಿ ಅಜ್ಜಪ್ಪ ತೆರೆಯಿದೆ ಹಾಗೂ ನುಚ್ಚಟ್ಟಿ ತೆರೆಯಿದೆ. ಮೇಲೇರಿ ಬೆಂಕಿ ಆಕಾಶದೆತ್ತರಕ್ಕೆ ಉರಿಯುತ್ತಿರುತ್ತದೆ. ಬಹಳ ಸುಂದರವಾದ ದೃಶ್ಯ ರಾತ್ರಿ ಮೂಡಿ ಬರುತ್ತದೆ.

ಅದಾದ ಮಾರನೇ ದಿನ ಬಳಿಗ್ಗೆ ಮೇಲೇರಿ, 5ನೇ ತಾರೀಕು ಎಲ್ಲ ಉರಿದು ಕೆಂಡ ರಾಶಿ ಮಾತ್ರ ಉಳಿದಿರುತ್ತದೆ. ಬೆಳಿಗ್ಗೆ ಎಲ್ಲರು ಸ್ನಾಮಾಡಿ ಕೆಂಡ ಹಾರುವುದಿದೆ. ಚಿಕ್ಕ ಚಿಕ್ಕ ಮಕ್ಕಳನ್ನು ಎತ್ತಿ ಹಾರಿಸುವುದು ಕೂಡ ಇದೆ. ಇದು ಬಹಳ ಒಳ್ಳೆಯದು ಇದಾಗಿ ಸ್ವಲ್ಪದರಲ್ಲಿಯೇ ವಿಷ್ಣುಮೂರ್ತಿಯ ಕೋಲ ಬರುತ್ತದೆ. ಇದು ಕೆಂಡದ ಮೇಲೆ 101 ಸಲ ಬೀಳುತ್ತದೆ. ಅನಂತರ ಇದರ ಜೊತೆ ಎಲ್ಲರು ನಮ್ಮ ನಮ್ಮ ಕಷ್ಟಗಳನ್ನು ಕೇಳುತ್ತಾರೆ ಎಲ್ಲರಿಗೂ ಒಳ್ಳೆಯ ಉತ್ತರವೇ ಇಲ್ಲಿ ಸಿಕ್ಕಿ ಎಲ್ಲರ ಕಷ್ಟ ಪರಿಹಾರವಾಗುತ್ತದೆ. ಮೈಮೇಲೆ ಭೂತ ಇದ್ದರೆ ಈ ದೇವರ ಎದುರು ಎಲ್ಲ ಬಂದು ಬಿಡುತ್ತದೆ. ಆಮೇಲೆ ಅದೇ ಅದಕ್ಕೆ ಪರಿಹಾರ ಮಾಡುತ್ತದೆ. ಆಮೇಲೆ ಚೌಂಡಿಯ ಬಾರಣೆಯಿದೆ. ಕೋಳಿ, ಎಳನೀರು, ಹೊದುರಿ ಬಾಳೆಹಣ್ಣು ಇದಾದ ನಂತರ ಚೌಂಡಿಯ ಮುಖವಾಡ ಇಡುತ್ತಾರೆ. ಆಮೇಲೆ ಪುನಃ ಜನ ಕೇಳಿಸುತ್ತಾರೆ. ಅದಾದ ಮೇಲೆ ಚೌಂಡಿ ತಿರಳಗಾರ ಕೂಡ ಕುಣಿಯುತ್ತಾರೆ. ಆ ಮೇಲೆ ಅದೇ ಸಂಜೆ 4 ಗಂಟೆಗೆ ಗಳೆತರೆ ಕಟ್ಟುತ್ತಾರೆ. ಸಂಜೆ 5 ಗಂಟೆಗೆ ತೆರೆ ಭನಕ್ಕೆ ತೆರಳುತ್ತದೆ ಎಲ್ಲರು ಹಂದಿ ಕೋಳಿ ಹಿಡಿದು ಆ ಕಡೆ ನಡೆಯುತ್ತಾರೆ. ಅಲ್ಲಿ ರಾತ್ರಿ 8 ಗಂಟೆಯ ಸುಮಾರಿಗೆ ಹಂದಿ ಕೋಳಿ, ಕುಯ್ಯುತ್ತಾರೆ. ಬಹಳ ಊರಿನಿಂದ ಜನರು ತಮ್ಮ ತಮ್ಮ ಹರಕೆಯ ಹಂದಿ ಕೋಳಿ ಕೊಡುತ್ತಾರೆ. ಸುಮಾರು 50 ಹಂದಿ 250 ಕೋಳಿ ಬೀಳುತ್ತದೆ. ಅದಾಗಿ ರಾತ್ರಿ 9-10 ಗಂಟೆಗೆ ಎಲ್ಲರು ಅವರವರ ಮನೆಗೆ ತೆರಳುತ್ತಾರೆ. ಆದಿನ ರಾತ್ರೀ ಬೇಕಾದರೆ ಅನ್ನ ಮಾಡಿ ಊಟ ಮಾಡಬಹುದು. ಅಲ್ಲಿವರೆಗೆ ಮೂರುದಿನ ಫಟ್ಟಿ ಅಂದರೆ ದೋಸೆ, ತಟ್ಟೆ ಇಡ್ಲಿ ಮಾತ್ರ ಮಾಡಬೇಕು. ಈ ಹಬ್ಬದಲ್ಲಿ ಬಹಳ ಪದ್ಧತಿಯಿದೆ ಅಷ್ಟೇ ನಮ್ಮ ಚೌಂಡಿಗೆ ಸತ್ಯಕೂಡ ಇದೆ. ಚೌಂಡಿಯ ಭನದಲ್ಲಿ ಹಂದಿ, ಕೋಳಿ ಕುಯಿದು ರಾತ್ರಿ ಹಿಂದಿರುಗಿದರೆ ಮತ್ತೆ 3 ದಿನ ಆ ಕಡೆ ಯಾರು ಸುಳಿದಾಡಬಾರದು. ಹಾಗೇನಾದರು ಹೋದರೆ ಅವರು ಮತ್ತೆ ಮೇಲೇಳಲಾರರು. ಇದು ನಿಜವಾಗಲು ಸತ್ಯ ಇನ್ನು 6ನೇ ತಾರೀಕಿಗೆ ದೇವರ ಜಳಕ ಇದು ದೇವಸ್ಥಾನ ಕರೆಯಲ್ಲಿ ದೇವರನ್ನು ಸುದ್ದ ಮಾಡಿ ಬಲಿ ಬಂದು ದೇವಸ್ಥಾನದಲ್ಲಿ ಪುನಃ ಇಡುತ್ತಾರೆ ಇದು ಕೊನೆಯ ದಿನ. ಆ ನಂತರ ಪಾಯಸದ ಊಟ ಪ್ರಸಾದ ವಿನಿಯೋಗವಿದೆ

ಇನ್ನು ಮಾರನೇ ದಿನ ಭಂಡಾರ ಲೆಕ್ಕಚಾರ ಇಲ್ಲಿಗೆ ಹಬ್ಬ ಮುಕ್ತಯ ಪ್ರತಿವರ್ಷವು ಎಲ್ಲರು ಬನ್ನಿ ದೇವರ ವಿಶೇಷ ದರ್ಶನ ಪಡೆದು ನಿಶ್ಚಿಂತೆಯಿಂದ ತೆರಳಿರಿ.

ಬಲ್ಯಾಟನ ಪದ್ಮಯ್ಯಲಿಂಗಪ್ಪ, ಬೆಂಗಳೂರು.

---

ಅಂತೆ ಹೋಗುವವನಿಗೆ, ಅರ್ಧ ರೊಟ್ಟಿ ಸಾಲದು

# ಧರ್ಮ

"ಸತ್ಯಂ ವದ ಧರ್ಮಂ ಚರ" ಎನ್ನು ಮಾತನ್ನು ಕೇಳುತ್ತೇವೆ, ಅದಕ್ಕೆ ಏನರ್ಥ?_"ಸತ್ಯವನ್ನು ಹೇಳು, ಧರ್ಮಮಾರ್ಗದಲ್ಲಿ ಹೋಗು. ಇದು ಉಪನಿಷತ್ತಿನ ಮಾತು. ಇಲ್ಲಿ ಧರ್ಮವೆಂದರೇನು?

ಯಾವುದು ಧರಿಸಿ ನಿಲ್ಲುತ್ತದೋ ಅದೇ ಧರ್ಮ, ಮನುಷ್ಯನನ್ನು ಸಮಾಜವನ್ನೂ ಹಲವು ಕಾಲ ನಿಲ್ಲಿಸಬಲ್ಲದ್ದು ಧರ್ಮ. ಸಾವಿರಾರು ವರ್ಷಗಳಿಂದ ಸೂರ್ಯೋದಯ, ಸೂರ್ಯಾಸ್ತ, ಗಾಳಿ ಬೀಸುವುದು, ಮಳೆ ಬೀಳುವುದು, ವಸಂತದಲ್ಲಿ ಗಿಡಮರಗಳು ಹಸಿರನ್ನು ತೊಡುವುದು, ಇವೆಲ್ಲಾ ನಡೆದುಕೊಂಡು ಬರುತ್ತಿವೆ. ಹೀಗೆ ಕ್ರಮಬದ್ಧವಾಗಿ ಎಲ್ಲ ನಡೆದುಕೊಂಡು ಹೋಗುವುದು ಹೇಗೆ? ಈ ಎಲ್ಲವನ್ನೂ ಹೊತ್ತು ಸರಿಯಾಗಿ, ಯಥಾವತ್ತಾಗಿ ನಡೆಸುವುದು ಧರ್ಮ, ಒಂದು ನಿಯಮ, ಯಾರಿಗೆ ಇದು ಬೇಕು, ಯಾರಿಗೆ ಅದು ಬೇಡ ಎನ್ನುವ ಪ್ರಶ್ನೆಯ ಗೊಡವೆ ಇಲ್ಲದೆ ಈ ಎಲ್ಲ ವಸ್ತುಗಳೂ ಶಕ್ತಿಗಳೂ ತಮ್ಮ ಸ್ವಭಾವಕ್ಕೆ ಅನುಗುಣವಾಗಿ ಒಂದು ನಿಯಮಕ್ಕೆ ಅನುಸಾರವಾಗಿ, ತಮ್ಮ ಕರ್ತವ್ಯವನ್ನು ಮಾಡಿಕೊಂಡು ಸಾಗುತ್ತವೆ. ಇವೆಲ್ಲವನ್ನು ಧರಿಸಿ ಇವಕ್ಕೆ ಆಧಾರವಾಗಿ ನಡೆಸಿಕೊಂಡು ಹೋಗುವ ಶಕ್ತಿ ಧರ್ಮ ಯಾವ ಗುಣವಿಶೇಷ ತಾನೂ ಅಚಲವಾಗಿದ್ದು ಇತರರೂ ಅಚಲವಾಗಿ ನಿಲ್ಲುವಂತೆ ಮಾಡುತ್ತದೋ ಅದೇ ಧರ್ಮ, ತಾನೂ ಸ್ಥಿರವಾಗಿ ನಿಂತು ಇತರರನ್ನೂ ಸ್ಥಿರವಾಗಿ ನಿಲ್ಲಿಸುವುದೋ ಅದೇ ಧರ್ಮ

ಈ 'ಧರ್ಮ'ದ ಅಗತ್ಯವೇನು? ಪ್ರತಿಯೊಬ್ಬನಿಗೂ ಇಷ್ಟ ಅನಿಷ್ಟಗಳಿರುತ್ತವೆ. ಬಹುಮಂದಿಗೆ ಐಶ್ವರ್ಯ ಬೇಕು. ಬಡತನ ಬೇಡ, ವಿರಾಮ ಬೇಕು, ಶ್ರಮ ಬೇಡ, ಅಧಿಕಾರಬೇಕು, ಇತರರಿಗೆ ಅಧೀನರಾಗಿರುವುದು ಬೇಡ, ಪ್ರತಿಯೊಬ್ಬನೂ ತನಗೆ ಬೇಕಾದದ್ದನ್ನು ಪಡೆಯುವುದು. ಬೇಡವಾದದ್ದನ್ನು ಬಿಡುವುದು ಇಷ್ಟನ್ನೇ ಮಾಡುತ್ತಿರುವುದಾದರೆ, ಶಕ್ತಿವಂತ ನಾದವನು ಇತರರನ್ನು ಕಾಲಿನ ಕೆಳಗೆ ಹಾಕಿ ತುಳಿದಾನು. ತನ್ನ ಗುಲಾಮರನ್ನಾಗಿ ಮಾಡಿಕೊಂಡಾನು ರಾಕ್ಷಸ ಮಾಡಿದ್ದೇ ಸರಿ ಎಂದಾದೀತು, ಇದು ಹುಲಿ, ಸಿಂಹ ತೋಳಗಳ ರೀತಿ, ಗಾಳಿಗೆ ಒಂದು ಕಡೆಯಿಂದ ಬೀಸುವುದು 'ಧರ್ಮ' ಸೂರ್ಯನಿಗೆ ಬೆಳಕು ಕೊಡುವುದು'ಧರ್ಮ' ಗಾಳಿಯು ಬೆಳಕನ್ನು ಪಡೆದು ಅದು ಸೂರ್ಯನಲ್ಲಿವಾದ್ದರಿಂದ ಸೂರ್ಯ ಬೀಸಲಾರ ಅವನು ಗಾಳಿಯಲ್ಲಿ ವಾದ್ದರಿಂದ. ಹಾಗೆಯೆ ಮನುಷ್ಯ ಹುಲಿಯಾಗಿ, ಸಿಂಹವಾಗಿ, ತೋಳವಾಗಿ, ತಿಗಣೆಯಾಗಿ, ಸೊಳ್ಳೆಯಾಗಿ ಹುಟ್ಟಿಲ್ಲ, ಆದ್ದರಿಂದ ಅವುಗಳಂತೆ ಬಾಳಲಾಗದು. ಅವುಗಳಿಗೆ ಇಲ್ಲದ ಶಕ್ತಿ, ವಿವೇಚನಾ ಶಕ್ತಿ, ನ್ಯಾಯಾನ್ಯಾಯ ಪ್ರಜ್ಞೆ, ಅವನಿಗೆ ಇರುವುದರಿಂದ ಅವನ ಧರ್ಮ ಬೇರೆ, ಅದು ತನ್ನ ಇಷ್ಟ ಅನಿಷ್ಟಗಳನ್ನು ಮರೆತು ನ್ಯಾಯಬದ್ಧವಾಗಿ ನಡೆಯುವುದು.

ಪ್ರಾಚೀನ ಭಾರತೀಯರು ಧರ್ಮವೆಂದರೇನು ಎಂಬುದನ್ನಷ್ಟು ತಿಳಿಸಲಿಲ್ಲ. ಅದನ್ನು ಪ್ರತಿಪಾದಿಸುವುದಕ್ಕಾಗಿ ಹಲವು ಪಾತ್ರಗಳನ್ನು ಸೃಷ್ಟಿಸಿದರು. ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿನ ಪಾತ್ರಗಳಲ್ಲಿ ಶ್ರೀರಾಮ, ಸೀತೆ, ಧರ್ಮರಾಯ, ಹರಿಶ್ಚಂದ್ರ ಇಂಥ ಪಾತ್ರಗಳು ಮರೆಯಲಾಗದಂಥವು. ಸತ್ಯದ ದಾರಿಯನ್ನು ಬಿಡದೆ ಇರುವುದು, ಪರರಿಗೆ ಉಪಕಾರ ಮಾಡುವುದು, ಯಾವ ರೀತಿಯ ಅನೀತಿಯೂ ಇಲ್ಲದಿರುವುದು, ನ್ಯಾಯದಿಂದ ಬಾಳುವುದು ಮೊದಲಾದ ನೀತಿ ನಿಯಮಗಳು ಧರ್ಮದ ಆಧಾರಸ್ತಂಭಗಳು.

ಧರ್ಮದ ಪರಿಪಾಲನೆಯಲ್ಲಿ ಪ್ರತಿಯೊಬ್ಬನೂ ಔಚಿತ್ಯವನ್ನೂ ತನ್ನ ಸಾಮರ್ಥ್ಯವನ್ನು ಅಗತ್ಯವನ್ನೂ ತಿಳಿದು ಕೊಂಡು ಅದಕ್ಕೆ ಅನುಗುಣವಾಗಿ ನಡೆಯಬೇಕು. ಸಮಾಜದಲ್ಲಿ ಪ್ರತಿಯೊಬ್ಬನಿಗೂ ಅವನದೇ ಆದ ಒಳ್ಳೆಯ ರೀತಿನೀತಿಗಳಿವೆ. ರಾಜನಿಗೆ ರಾಜ ಧರ್ಮ, ಶಿಷ್ಯನಿಗೆ ಶಿಷ್ಯಧರ್ಮ, ಗುರುವಿಗೆ ಆಚಾರ್ಯಧರ್ಮ ಪ್ರತಿಯೊಬ್ಬನೂ ತನಗೆ ಒಪ್ಪುವ ಧರ್ಮಕ್ಕೆ ಅನುಗುಣವಾಗಿ ನಡೆಯಬೇಕಾಗುತ್ತದೆ. ಕಷ್ಟದ ಪರಿಸ್ಥಿತಿಗಳು ಬಂದಾಗ ಸ್ವರಕ್ಷಣೆಗಾಗಿ ಯುದ್ಧ ಮಾಡುವುದು ಧರ್ಮ, ಮಾನವ ಹುಟ್ಟಿರುವುದೇ ಧರ್ಮ ಕ್ಷೇತ್ರದಲ್ಲಿ, ಯಾರು ಧರ್ಮವನ್ನು ರಕ್ಷಿಸುತ್ತಾರೋ ಅವರನ್ನು ಧರ್ಮ ರಕ್ಷಿಸುತ್ತದೆ.

"ಧರ್ಮೋ ರಕ್ಷತಿ ರಕ್ಷಿತಃ" ಯಾರು ಧರ್ಮಕ್ಕಾಗಿ ಹೋರಾಡುತ್ತಾರೋ, ತಮ್ಮ ಜೀವನವನ್ನು ಮೀಸಲಾಗಿಡುತ್ತಾರೋ ಅವರನ್ನು ಅವರ ಧರ್ಮವೇ ರಕ್ಷಿಸುತ್ತದೆ, ಅವರ ನಡತೆ ಅವರನ್ನು ಕಾಪಾಡುತ್ತದೆ.

ಲೋಕ ಕಲ್ಯಾಣಕ್ಕಾಗಿ, ಸರ್ವಜನರ ಹಿತಕ್ಕಾಗಿ, ಆತ್ಮೋನ್ನತಿಗಾಗಿ ಯಾವ ಮಾರ್ಗವನ್ನು ಅನುಸರಿಸಬೇಕು, ಮಾನವನ ನಡೆ ನುಡಿ ಹೇಗಿರಬೇಕು ಎಂಬುದನ್ನು ವಿವಿಧ ಮತ ಪ್ರಚಾರಕರು ವಿವಿಧ ರೀತಿಗಳಲ್ಲಿ ಹೇಳಿದ್ದಾರೆ. ಅವರು ಸೂಚಿಸಿರುವ ವಿಧಾನಗಳು ಬೇರೆ ಬೇರೆಯಾಗಿ ಕಾಣಬಹುದಾದರೂ, ಅವೆಲ್ಲದರ ಗುರಿಯೂ ಒಂದೇ, ಧಾರ್ಮಿಕ ಜೀವನದಿಂದ ಲೋಕದ ಹಿತ ಮಾನವ ಹಿತ.

ನಮ್ಮ ರಾಷ್ಟ್ರಧ್ವಜದಲ್ಲಿ ಧರ್ಮಚಕ್ರವನ್ನು ಸಂಕೇತವಾಗಿ ಹಾಕಿರುವುದೂ ಇದೇ ಉದ್ದೇಶದಿಂದ. ಭಾರತೀಯರು ಎಂದೆಂದೂ ಧರ್ಮಮಾರ್ಗದಲ್ಲಿ ಚಲಿಸಲಿ ಎಂಬ ಸಂದೇಶವನ್ನು ಸಾರುತ್ತ ಹಾರುತ್ತಿದೆ ಭಾರತದ ತ್ರಿವರ್ಣ ಧ್ವಜ.

ಲೋಕದ ಎಲ್ಲಾ ನಾಗರಿಕ ಸಮಾಜಗಳಲ್ಲೂ ಧರ್ಮದ ಪಾಲನೆಯುಂಟು.

**ಕುಂಬಗೌಡನ ರಂಜಿತ್, ಘಕ್ಕಂದೂರು**

---

## ಲಗ್ನ ಕಾರ್ಯಗ

1. ಭಾಗಮಂಡಲನಾಡು ಚೇರಂಗಾಲ ಗ್ರಾಮದ ಪಾಂಡಿ ಚಂಗಪ್ಪನವ್ರ ಮಂಜ ಗಣೇಶಂಗೂ ಮತ್ತೆ ಬಲ್ಲಮಾವಟಿ ಗ್ರಾಮದ ಎಡಿಕೇರಿ ಗಣೇಶನವ್ರ ಮಗ್ಳು ಅನುಪಮ ಇವ್ರ ಮದ್ವೆ ಭಾಗಮಂಡಲ ಗೌಡಸಮಾಜಲಿ ತಾರೀಖ್ 28-4-2000ಕ್ಕೆ ಕಳ್ತ್.

2. ಕುಂದಚೇರಿ ಗ್ರಾಮದ ಪೊನ್ನೆಟಿ ಪೊನ್ನಪ್ಪನವ್ರ ಮಗ್ಳು ಪವಿತ್ರಂಗೂ ಮತ್ತೆ ಹರದೂರು ಗ್ರಾಮದ ಪಾರೆಮನೆ ಚಂಗಪ್ಪನವ್ರ ಮಂಜ ದಿನೇಶ್‌ಗೂ ತಾರೀಖ್ 1-5-2000ಕ್ಕೆ ಕುಶಾಲನಗರ ಗೌಡ ಸಮಾಜಲಿ ಮದ್ವೆ ಕಳ್ತ್.

---

ಸೋತು ನೋಡು, ಸ್ನೇಹಿತನ ಗುಣ

# ವನಿತಾಲೋಕ : ಗೃಹಸಂಗಾತಿ

## ಮಾವಿ ಕಾಯಿಯ ಕೊಚ್ಚಲು ಉಪ್ಪಿನ ಕಾಯಿ

**ಬೇಕಾಗುವ ಸಾಮಾನು :** 15 ಚೆನ್ನಾಗಿ ಬಲಿತ ಮಾವಿನ ಕಾಯಿ. 5ಕಪ್ ಉಪ್ಪು,160ಗ್ರಾಂ ಹಸಿ ಮೆಣಸಿನಕಾಯಿ(ಹೆಚ್ಚಿ), 160ಗ್ರಾಂ ಹಸಿಶುಂಠಿ (ಹೆಚ್ಚಿ), 160ಗ್ರಾಂ ಬೆಳ್ಳುಳಿ (ಸಿಪ್ಪೆ ಸುಲಿದು, ಹೆಚ್ಚಿ) ½ ಬಾಟಲಿ ಸಿರ್ಕ(ವಿನಗರ್), ½ ಬಾಟ್ಲಿ ಎಳ್ಳೆಣ್ಣೆ ಸ್ವಲ್ಪ ಇಂಗು ಮತ್ತು ಕರಿಬೇವಿನ ಎಲೆ.

**ಮಸಾಲೆ ಅರೆಯಲು :** 250 ಗ್ರಾಂ ಒಣ ಮೆಣಸಿನ ಕಾಯಿ , 25ಗ್ರಾಂ ಜೀರಿಗೆ, 15 ಗ್ರಾಂ ಅರಿಸಿನ, 25ಗ್ರಾಂ ಸಾಸಿವೆ, 30ಗ್ರಾಂ ಎಳ್ಳು, 15 ಗ್ರಾಂ ಕರಿಮೆಣಸಿನ ಕಾಳು, 15 ಗ್ರಾಂ ಕಡ್ಲೆ ಬೇಳೆ,10ಗ್ರಾಂ ಹೆಸರುಬೇಳೆ, 10ಗ್ರಾಂ ಉದ್ದಿನ ಬೇಳೆ.

**ವಿಧಾನ :** ಮಾವಿನ ಕಾಯಿಯ ಸಿಪ್ಪೆ ಸುಲಿದು ಮೆಟ್ಟು ಕತ್ತಿಯಿಂದ ಕೊಚ್ಚಿ ಕೊಚ್ಚಲು ತಯಾರಿಸಿ. 2ಕಪ್ ಉಪ್ಪನ್ನು ಪುಡಿಮಾಡಿ. ಅದಕ್ಕೆ ಮಾವಿನ ಕಾಯಿಯ ಕೊಚ್ಚಲು ಸೇರಿಸಿ ಬೆರೆಸಿ ಅದರ ಮೇಲೆ ಭಾರ ಇಟ್ಟುಕೊಳ್ಳಿ. ಮರು ದಿವಸ ಅದನ್ನು ಹಿಂಡಿ ಬಸಿದು ಇಟ್ಟುಕೊಳ್ಳಿ. ಮಸಾಲೆಯ ಜೀನಸುಗಳನ್ನು ಎಣ್ಣೆ ಮುಟ್ಟಿಸದೆ ಬೇರೆ ಬೇರೆಯಾಗಿ ಒಣ ಹುರಿದು ಪುಡಿಮಾಡಿ, ಇಲ್ಲವೆ ಕುದಿಸಿದ ಉಪ್ಪಿನ ನೀರಿನೊಂದಿಗೆ ಅರೆಯಿರಿ. ಹಸಿ ಮೆಣಸಿನಕಾಯಿ, ಹಸಿಶುಂಠಿ ಮತ್ತು ಬೆಳ್ಳುಳ್ಳಿ ಇವುಗಳನ್ನು ಮಾವಿ ಕೊಚ್ಚಲಿಗೆ ಹಾಕಿ ಬೆರಸಿ. 3ಕಪ್ ಉಪ್ಪನ್ನು 4 ಕಪ್ ನೀರಿಗೆ ಸೇರಿಸಿ ಕುದಿಸಿ ಅದಕ್ಕೆ ಸಿರ್ಕ (ವಿನಿಗರ್) ಸೇರಿಸಿ ಕೆಳಗಿಳಿಸಿ. ಈ ಉಪ್ಪಿನ ದ್ರವಕ್ಕೆ ಮಸಾಲೆಯ ಕಣಕ ಮತ್ತು ಮಾವಿನ ಕೊಚ್ಚಲನ್ನು ಸೇರಿಸಿ ಚೆನ್ನಾಗಿ ಕಲಕಿ ಮಿಶ್ರಮಾಡಿ. ಎಳ್ಳೆಣ್ಣೆಯನ್ನು ಕಾಯಿಸಿ. ಅದಕ್ಕೆ ಕರಿಬೇವಿನ ಎಲೆ ಮತ್ತು ಹಿಂಗು ಸೇರಿಸಿ ಹುರಿದು ಉಪ್ಪಿನಕಾಯಿಯ ಮಿಶ್ರಣಕ್ಕೆ ಒಗ್ಗರಣೆ ಹಾಕಿ. ಬಿಸಿಯಾದ ನಂತರ ಜಾಡಿಯೊಳಗೆ ತುಂಬಿಸಿ. ಬಟ್ಟೆಯೊಂದನ್ನು ಎಣ್ಣೆಯಲ್ಲಿ ಅದ್ದಿ ಜಾಡಿಯ ಬಾಯಿಗೆ ಇಟ್ಟು ಮುಚ್ಚಳಹಾಕಿ.

## ಮಾವಿನಕಾಯಿ ಕೊಚ್ಚಲಿನ ಸಿಹಿ ಉಪ್ಪಿನಕಾಯಿ

1ಕಿ.ಗ್ರಾಂ ಬೆಲ್ಲವನ್ನು ½ ಲೀ. ನೀರಿನಲ್ಲಿ ಕರಗಿಸಿ ಬೇಯಿಸಿ ಬೆಲ್ಲದ ಪಾನಕ (ಸಿರಪ್) ಮಾಡಿ. ಮಾವಿನ ಕಾಯಿಯ ಕೊಚ್ಚಲು ಉಪ್ಪಿನಕಾಯಿಯಲ್ಲಿ ಹೇಳಿದ ಪ್ರಕಾರ ತಯಾರಿಸಿದ ಉಪ್ಪನಕಾಯಿಗೆ ಬೆರಸಿ ಮಿಶ್ರಮಾಡಿ.

## ಮಾವಿನ ಸಿಹಿ ಉಪ್ಪಿನಕಾಯಿ

**ಬೇಕಾಗುವ ಸಾಮಾನು :** ಬಲಿತ 5ಮಾವಿನ ಕಾಯಿ, 4ಉಂಡೆ ಬೆಲ್ಲ, 4ಟೀ ಚಮಚ ಮೆಣಸಿನ ಪುಡಿ, ಉಪ್ಪು.

**ವಿಧಾನ :** ಮಾವಿನ ಕಾಯಿಗಳನ್ನು ಹೋಳುಗಳಾಗಿ ಹೆಚ್ಚಿಕೊಳ್ಳಿ, ಬಾಣಲೆಯಲ್ಲಿ ಹಿಂಗು, ಸಾಸಿವೆ, ಅರಿಸಿನದ ಒಗ್ಗರಣೆ ಮಾಡಿ ಈ ಹೋಳುಗಳನ್ನು ಹಾಕಿ. ಬೆಲ್ಲ ಹಾಕಿ ಬೇಯಿಸಿ ನಂತರ ಮೆಣಸಿನ ಪುಡಿ, ಉಪ್ಪು ಹಾಕಿ ಕಲಸಿ ಕೆಳಗಿಳಿಸಿ.

## ಮಾವಿನ ಹೋಳಿನ ಉಪ್ಪಿನ ಕಾಯಿ

**ಬೇಕಾಗುವ ಸಾಮಾನು :** 12 ಬಲಿತ ಮಾವಿನ ಕಾಯಿ, 3½ ಕಪ್ ಉಪ್ಪು, ¼ ಬಾಟಲಿ ಎಳ್ಳೆಣ್ಣೆ, ಸ್ವಲ್ಪ ಹಿಂಗು ( ಪುಡಿಮಾಡಿದ್ದು) ಸ್ವಲ್ಪ ಕರಿಬೇವಿನ ಎಲೆ.

## ಮಸಾಲೆ ಅರೆಯಲು ಮೇಲೆ ಹೇಳಿರುವ ಪ್ರಕಾರ

**ವಿಧಾನ :** ಮಾವಿನ ಕಾಯಿಯನ್ನು ಸಿಪ್ಪೆ ಸಹಿತ ಕತ್ತರಿಸಿ ಬೇಕಾದ ಹಾಗೆ ಸಣ್ಣ ಸಣ್ಣ ಹೋಳುಮಾಡಿ. ಅದಕ್ಕೆ 11/2 ಕಪ್ ಉಪ್ಪು ಬೆರಸಿ 2 ದಿವಸಗಳ ಕಾಲ ಅದರ ಮೇಲ ಭಾರ ಇಟ್ಟುಕೊಳ್ಳಿ. ಈ 2 ದಿವಸಗಳಲ್ಲಿ ಮಾವಿನ ಹೋಳು(ತುಂಡು) ಗಳನ್ನು ಮೇಲೆ ಕೆಳಗೆ ಮಾಡಿ, ಮಗುಚಿ ಇಟ್ಟುಕೊಳ್ಳಿ. ಆ ಮೇಲೆ ಆ ಹೋಳುಗಳನ್ನು ಹಿಂಡಿ ಬಸಿದು ತೆಗೆದು ಬಿಸಿಲಿನಲ್ಲಿ ಇಟ್ಟು ಅದರ ತೇವವನ್ನು (ಪಸೆಯನ್ನು)ಒಣಗಿಸಿ. 2ಕಪ್ ಉಪ್ಪನ್ನು ನೀರಿನಲ್ಲಿ ಹಾಕಿ ಬೇಯಿಸಿ ಕರಗಿಸಿ ಕೆಳಗಿಳಿಸಿ ಇಟ್ಟುಕೊಳ್ಳಿ. ಆ ಬಳಿಕ ಮೇಲೆ ಹೇಳಿರುವಂತೆ ಮಸಾಲೆಯನ್ನು ಅರೆಯಿರಿ. ಈ ಮಸಾಲೆಯ ಕಣಕ ಮತ್ತು ಉಪ್ಪು ನೀರನ್ನು ಮಾವಿನಕಾಯಿಯ ಹೋಳುಗಳಿಗೆ ಸೇರಿಸಿ ಚೆನ್ನಾಗಿ ಕಲಕಿ. ಬಳಿಕ ಮೇಲೆ ಹೇಳಿರುವ ಪ್ರಕಾರ ಒಗ್ಗರಣೆ ಕೊಟ್ಟು ಮುಚ್ಚಿಡಿ.

## ಹಸಿ ಮೆಣಸಿನ ಕಾಯಿಯ ಉಪ್ಪಿನ ಕಾಯಿ

**ಬೇಕಾಗುವ ಸಾಮಾನು :** ¼ ಕಿ. ಗ್ರಾಂ. ಹಸಿ ಮೆಣಸಿನ ಕಾಯಿ, 10 ನಿಂಬೆ ಹಣ್ಣು, 4ಟೀ. ಚ. ಮೆಂತ್ಯದ ಪುಡಿ, 4 ಊ. ಚ. ಜೀರಿಗೆ ಪುಡಿ, 4 ಊ.ಚ. ಕರೀ ಎಳ್ಳುಪುಡಿ, 1 ಊ. ಚ. ಅರಿಸಿನ ಪುಡಿ, 1 ಬಟ್ಟಲು ಎಣ್ಣೆ, 2 ಊ. ಚ. ಸಾಸಿವೆ, ಹಿಂಗು, ಉಪ್ಪು.

**ವಿಧಾನ :** ಹಸಿಮೆಣಸಿನಕಾಯಿ ಉದ್ದುದ್ದವಾಗಿ ಎರಡು ಭಾಗವಾಗಿ ಸೀಳಿ, ಸೀಳುಗಳನ್ನು ಬೇರ್ಪಡಿಸಕೂಡದು. ಅಗಲವಾದ ಪಾತ್ರೆಯಲ್ಲಿ ಎಣ್ಣೆ ಹಾಕಿ ಸಾಸಿವೆ ಒಗ್ಗರಣೆ ಮಾಡಿ ಮೆಣಸಿನ ಕಾಯಿ ಹಾಕಿ. ನಂತರ ಒಲೆಯಿಂದ ಪಾತ್ರೆ ಕೆಳಗಿಳಿಸಿ ನಿಂಬೆರಸ, ಪುಡಿಗಳು ಉಪ್ಪು, ಹಿಂಗು, ಅರಸಿನ ಸೇರಿಸಿ ಚೆನ್ನಾಗಿ ಕಲಸಿ, ಆರಿದ ಮೇಲೆ ಶೀಸೆಗೆ ತುಂಬಿ, ಒಂದು ವಾರದ ತನಕ ಶೀಸೆಯಲ್ಲೇ ಕೆದಕುತ್ತಿರಿ.

---

ಉಪ್ಪು ತಿಂದವನು ನೀರು ಕುಡಿದೇ ಸಾಯಬೇಕು

---

# ಪತ್ರ ವಿಭಾಗ :



ಮಾನ್ಯರೆ,

ಸಂಗಾತಿ ಈಗ ನಿಜಕ್ಕೂ ಪ್ರತಿಯೊಬ್ಬರ ಸಂಗಾತಿ ಯಾಗುತ್ತಿದ್ದಾಳೆ. ಅಂದು ಸಂಗಾತಿ ಅವನತಿಯ ಹಾದಿಯಲ್ಲಿ ನಡೆಯುತ್ತಿದ್ದಾಳೆ ಎಂಬ ಸಂಪಾದಕರ ಅಳಲನ್ನು ಕೇಳಿ ಕೆಲವು ಸಲಹೆಗಳ ಪತ್ರ ಬರೆದಿದ್ದೆ. ನನ್ನಂತ ಇನ್ನು ಅನೇಕ ಸಲಹೆ ಸಹಕಾರವನ್ನು ಮನಗಂಡ ಸಂಗಾತಿ ಈಗ ತುಂಬಾ ಆಕರ್ಷಕಳಾಗಿದ್ದಾಳೆ. ಗೃಹ ಸಂಗಾತಿ, ಸರ್ಪಗಂಧ ಅತ್ಯಂತ ಆಕರ್ಷಣೀಯವಾಗಿದೆ. ಇಷ್ಟೊಂದು ದಿನ ಸಂಗಾತಿಯಲ್ಲಿ ಕೆಲವು Articleನ್ನು ಆರಿಸಿ ಓದುತ್ತಿದ್ದೆ. ಆದರೆ ಇಂದು ಅಡಿಯಿಂದ ಮುಡಿಯವರೆಗೆ ಕೊಂಕಿಲ್ಲ ಎನ್ನುವಂತೆ ಸಂಗಾತಿ ಮುಖ ಪುಟದಿಂದ ಕೊನೆಯ ಪುಟದವರೆಗೆ ಅತ್ಯಂತ ಆಕರ್ಷಕಣೀಯ ಸಂಗಾತಿ ಇನ್ನು ಹೆಚ್ಚಾಗಿ ಪ್ರತಿಯೊಬ್ಬರ ಮನೆಯ ಮತ್ತು ಮನದ ಮಾತಾಗಲಿ ಇದನ್ನು ಬೆಳೆಸುವುದು ಪ್ರತಿಯೊಬ್ಬ ಗೌಡರ ಆದ್ಯ ಕರ್ತವ್ಯ.

ನಮ್ಮಲ್ಲಿ ಭಾಷಾಭಿಮಾನ, ನಾಡಿನ ಅಭಿಮಾನ ಹೆಚ್ಚಿಸುವ ಸಂಗಾತಿ ನಿಜಕ್ಕೂ ಬೆಂಗಳೂರಿನಲ್ಲಿರುವ ನನಗೆ ಆತ್ಮೀಯ ಬಂಧುಗಳೊಂದಿಗೆ ಮಾತಾಡಿದಷ್ಟು ಸಂತೋಷವನ್ನು ಕೊಡುತ್ತೆ. ಇದರ ಮೇಲೆ ಮತ್ತು ಅತ್ಯಂತ ಕಷ್ಟಪಟ್ಟು ನಾಡು ನುಡಿಯ ಧ್ಯೋತಕವಾದ ಇದನ್ನು ಬೆಳೆಸುವ ಶೀಲಾಮಣಿ ಪ್ರಭಾಕರ್‌ರವರ ಮೇಲೆ ದೇವರ ಅನುಗ್ರಹ ಸದಾ ಇರಲಿ ಅಂತ ಪ್ರಾರ್ಥಿಸೋಣ

**ಹೊಸಮನೆ ಹೇಮಾ, ಬೆಂಗಳೂರು.**

### ಮೆಚ್ಚುಗೆ

ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಅರೆಭಾಷೆ ವಿಭಾಗದಲ್ಲಿ ಶಂಕರನ ಬಸಪ್ಪನವರು ಬರೆದ "ವಾಂಟೆಡ್ ಮಿಸ್ಟರ್ ರಾಜು" ಎಂಬ ಧಾರಾವಾಹಿ ತುಂಬಾ ಕುತೂಹಲ ಕಾರಿಯಾಗಿ ಮೂಡಿ ಬರುತ್ತಿದೆ. ಈ ಧಾರವಾಹಿ ಹೀಗೇ ಮುಂದುವರಿದು ಓದುಗರಿಗೆ ಹೆಚ್ಚಿನ ಆಸಕ್ತಿ ಮೂಡಲಿ ಎಂದು ನಾನು ಆಶಿಸುತ್ತೇನೆ.

**ಆಜಡ್ಕ ರಾಣಿ ಬಾಲಕೃಷ್ಣ, ಕುಶಾಲನಗರ**

**ಡಾ|| ಪುರುಷೋತ್ತಮ ಬಿಳಿಮಲೆಯವರು ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ ಏಪ್ರಿಲ್ 16-30ರ ಪತ್ರಿಕೆಯಲ್ಲಿ ಪತ್ರ ವಿಭಾಗದಲ್ಲಿ ಕೇಳಿದ ಪ್ರಶ್ನೆಗಳಿಗೆ ಉತ್ತರ.**

ಡಾ|| ಪುರುಷೋತ್ತಮ ಬಿಳಿಮಲೆಯವರು ಅವರಿಗಿರುವ ಸಂದೇಹವನ್ನು ನಿವಾರಿಸಲು ಕೇಳಿದ ಪ್ರಶ್ನೆಗಳಿಗೆ ಸ್ವಾಗತ.

1) ಗೌಡರು ದಕ್ಷಿಣ ಕನ್ನಡ ಜಿಲ್ಲೆಗೆ ಬಂದನಂತರ ಸಂಸ್ಕೃತರಾದರು ಎಂದು ನಾನು ಯಾವ ಲೇಖನಗಳಲ್ಲೂ ಹೇಳಲಿಲ್ಲ. ಯಾಕೆಂದರೆ ಗೌಡರು ದಕ್ಷಿಣ ಕನ್ನಡ ಜಿಲ್ಲೆಗೆ ಸುಮಾರು 1600 ಇಸವಿಯ ಹೊತ್ತಿಗೆ ಬಂದಿದ್ದಾರೆಂದು ಹೇಳಬಹುದು. ಅವರು ದಕ್ಷಿಣಕನ್ನಡ ಜಿಲ್ಲೆಗೆ ಬರುವುದಕ್ಕೆ ಮೊದಲು ಐಗೂರು, ಇಕ್ಕೇರಿ, ಹಾಗೂ ವಿಜಯನಗರದಲ್ಲಿದ್ದರೆಂದು ನಮ್ಮ ಹಿರಿಯರು ಹೇಳುತ್ತಿದ್ದದ್ದು ಸರಿ, ಅಲ್ಲದೆ ಕರ್ನಾಟಕದ ಹಲವಾರು ಚರಿತ್ರಕಾರರು ಅದರಲ್ಲೂ ಡಾ|| ಶಾಂಭಾಜೋಷಿಯವರು ಬರೆದ ಕರ್ನಾಟಕದ ಪೂರ್ವೇತಿಹಾವನ್ನು ಓದಿದಾಗ ಬೇರೆ ಬೇರೆ ಜನಾಂಗ ದವರುಗಳು ಕರ್ನಾಟಕಕ್ಕೆ ಎಲ್ಲಿಂದೆಲ್ಲಿಂದ ಬಂದರೆಂದೂ ಹೇಳುತ್ತಾರೆ. ಭಾರತೀಯ ಪ್ರಾಚೀನ ಚರಿತ್ರೆಯನ್ನು ಆಳವಾಗಿ ಅಭ್ಯಸಿಸಿದರೆ ಇದು ಗೊತ್ತಾಗುವುದು. ಗೌಡರು ಹಿಂದೆ ಯಧ-ತರ್ವಸ ಗುಂಪಿಗೆ ಸೇರಿದವರೆಂದು ಹಲವಾರು ಲೇಖಕರು ಸಾದರ ಪಡಿಸಿದ್ದಾರೆ. ಗೌಡರಿಗೆ ಹಾಲುವೊಕ್ಕಲು ಮಕ್ಕಳೆಂದೂ ಗೌಡರ ನಿರೂಪದಲ್ಲೂ ಇವರು South India ಎಂಬದಾಗಿ ಬರೆದ ಪಾಶ್ಚಾತ್ಯ ವಿದ್ವಾಂಸರು ಬರೆದಿದ್ದಾರೆ. ಗೌಡರ ಚರಿತ್ರೆ ಬರೆ ದಕ್ಷಿಣ ಕನ್ನಡ ಜಿಲ್ಲೆ ಯಾ ಹಾಸನ ಅಥವಾ ಇಕ್ಕೇರಿ ಯಾ ವಿಜಯನಗರಕ್ಕೆ ಮಾತ್ರ ಸೀಮಿತವಾಗಿಲ್ಲ. ಗೌಡರು ದಕ್ಷಿಣ ಕನ್ನಡ ಜಿಲ್ಲೆಗೆ ಬರುವುದಕ್ಕೂ ಮೊದಲು ಸಂಸ್ಕೃತಿಯನ್ನು ಹೊಂದಿದ್ದರು.

ಪುತ್ತೂರು ಮತ್ತು ಬೆಳ್ತಂಗಡಿಯಲ್ಲಿ ವಾಸವಾಗಿರುವ ಗೌಡರು ತುಳುಭಾಷೆಯನ್ನು ಮಾತಾಡುವುದರಿಂದ ಅವರು ಗೌಡರಲ್ಲವೆಂದು ಹೇಳಿದವರ್ಯಾರು? ಗೌಡರು ದಕ್ಷಿಣ ಕನ್ನಡ ಜಿಲ್ಲೆಗೆ ಬರುವ ಮೊದಲು ಅರೆಭಾಷೆಯನ್ನೇ ಆಡುತ್ತಿದ್ದರು. ಅವರಲ್ಲಿ ಕೆಲವರು ಪುತ್ತೂರು, ಬೆಳ್ತಂಗಡಿ, ಬಂಟ್ವಾಳ ತಾಲೂಕುಗಳಿಗೆ ಅರೆಭಾಷೆಯನ್ನಾಡುವ ಗೌಡರು ಹೋಗಿ ನೆಲೆಸಿ ಅಲ್ಲಿ ಹೆಚ್ಚಿನ ಜನರು ತುಳು ಭಾಷೆಯನ್ನಾಡುವುದರಿಂದ ಗೌಡರೂ ಸಹ ತುಳು ಭಾಷೆಯನ್ನಾಡಲು ಪ್ರಾರಂಭಿಸಿ ಈಗ ಅವರೆಲ್ಲಾ ತುಳು ಭಾಷೆಯನ್ನೇ ಆಡುತ್ತಾರೆ. ಆದ್ದರಿಂದ ತುಳು ಭಾಷೆಯನ್ನಾಡುವವರು ಗೌಡರಲ್ಲ ಎಂದು ಹೇಳಲು ಸಾಧ್ಯವೇ ಇಲ್ಲ. ಕೊಡಗಿನಲ್ಲಿ ಅರೆ ಭಾಷೆ ಯಾಡುವ ಗೌಡರು ಕೊಡವರು ಹೆಚ್ಚಾಗಿರುವ ನಾಪೋಕ್ಲು ನಾಡಿನ ನಾಪೋಕ್ಲು, ನಾಲಡಿ ಮುಂತಾದ ಸ್ಥಳಗಳಲ್ಲಿ ಮನೆಯಲ್ಲಿ ಕೊಡಗು ಭಾಷೆಯನ್ನು ಆಡುತ್ತಾರೆ. ಇನ್ನು ಕೆಲವರು ಕೊಡವತಿಯರನ್ನು ಮದುವೆಯಾಗಿ ಮನೆಯಲ್ಲಿ ಕೊಡವತಿಯರಂತೆಯೇ ಸೀರೆ ಉಡುತ್ತಾರೆ. ಆದರೂ ಇವರನ್ನು ಗೌಡರೆಂದೆ ಕರೆದು ಗೌಡರಾಗಿಯೇ ಇದ್ದಾರೆ. ಪುತ್ತೂರು ಬೆಳ್ತಂಗಡಿ ಮತ್ತು ಬಂಟ್ವಾಳದ ಗೌಡರು ಮನೆಯಲ್ಲಿ ತುಳುಭಾಷೆಯಾಡುವುದರಿಂದ ಮದುವೆಯಲ್ಲಿ ಅರೆಭಾಷೆಗೌಡರು ಹೇಳುವ ಮಾತುಗಳನ್ನು ತುಳುವಿನಲ್ಲೇ ಹೇಳುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ಅವರ ಮದುವೆಯ ವಿಧಿ ವಿಧಾನಗಳು ಅರೆಭಾಷೆ ಗೌಡರಂತೆಯೇ ಇದೆ. ಇದೇ ರೀತಿ ಹಳೇ ಮೈಸೂರಿನ ಮರಸ್ಕ ಒಕ್ಕಲಿಗರೂ ಕನ್ನಡ ಹಾಗೂ ತೆಲಗು ಭಾಷೆಯನ್ನಾಡುತ್ತಾರೆ. ಆದರೆ ಜಾತಿಯ ಸಂಬಂಧದಲ್ಲಿ ಅವರೆಲ್ಲಾ ಒಂದೇ.

ಗೌಡರ ಸಂಸ್ಕೃತಿ ಹಾಗೂ ಸಂಸ್ಕೃತಿಯ ಅಂಗವೆಂಬುದು ಯಾರೂ ಅಲ್ಲಗಳೆಯುವವರಿಲ್ಲ. ಗೌಡರು ಆರ್ಯರಿಗಿಂತ ಮೊದಲು ಭಾರತಕ್ಕೆ ಬಂದು ನೆಲಸಿದರೆಂಬುದಕ್ಕೆ ದ್ರಾವಿಡ ಸಂಸ್ಕೃತಿಯ ಚರಿತ್ರೆಯನ್ನು ಓದಿದರೆ ಗೊತ್ತಾಗುವುದು. ಹಿಂದೂ ಸಂಸ್ಕೃತಿ ಆರ್ಯ ಮತ್ತು ದ್ರಾವಿಡ ಸಂಸ್ಕೃತಿಯ ಸಮ್ಮಿಲನ. ಆರ್ಯರೂ ಹಿಂದೂ ದೇಶಕ್ಕೆ ಬರುವುದಕ್ಕೆ ಮೊದಲು ಆರ್ಯರಲ್ಲಾದ

ದ್ರಾವಿಡ ಸಂಸ್ಕೃತಿ ಭಾರತದಲ್ಲಿ ಇತ್ತು ಇದಕ್ಕೆ ಸಾಕ್ಷಿ ಸಿಂಧೂ ನದೀ ಕಣಿವೆಯ 'ಸಂಸ್ಕೃತಿ' ಸಿಂಧೂ ನದೀ ಕಣಿವೆಯ ಸಂಸ್ಕೃತಿ (Indus Vally Civilization) ಆರ್ಯರು ಭಾರತಕ್ಕೆ ಕಾಲಿಡುವುದಕ್ಕೆ ಮೊದಲು ಇದ್ದ ಸಂಸ್ಕೃತಿ ಗೌಡರು ಆರ್ಯತರ ದ್ರಾವಿಡ ಪಂಗಡಕ್ಕೆ ಸೇರಿದವರು. ಆ ಸಮಯದಲ್ಲಿ 'ಹಿಂದೂ ಸಂಸ್ಕೃತಿ' ಎಂಬುದು ಇತ್ತಿಲ್ಲ. ಆರ್ಯರು ಭಾರತಕ್ಕೆ ಬಂದು ದ್ರಾವಿಡರೊಡನೆ ಮಿಳಿತವಾದ ನಂತರ ಹಿಂದೂ ಸಂಸ್ಕೃತಿ ಪ್ರಾರಂಭವಾಯಿತು. ತದನಂತರ ಆರ್ಯರೂ ದ್ರಾವಿಡರೂ ಹಿಂದೂಗಳಾದರು. ಆರ್ಯರು ಸೂರ್ಯ, ಚಂದ್ರ, ಅಗ್ನಿ, ವರುಣ, ನೀರನ್ನು ಪೂಜಿಸಿದರೆ ದ್ರಾವಿಡರು, ಕಲ್ಲು, ಸರ್ಪಲಿಂಗ, ಆಲದಮರವನ್ನು ಪೂಜಿಸುತ್ತಿದ್ದರು. ಆರ್ಯ ದ್ರಾವಿಡ ಸಂಸ್ಕೃತಿಯ ಮಿಲನವಾದನಂತರ ಶಿವ ಇವರಿಬ್ಬರ ದೇವರಾದ. ಶಿವ ಹಿಂದೂ ಸಂಸ್ಕೃತಿಯ ದೇವರು ಅಗ್ನಿ, ವರುಣ, ಸೂರ್ಯ ಹಾಗೂ ಹಾವು ಲಿಂಗ ದ್ರಾವಿಡ ದೇವರೂ ಸೇರಿ ಶಿವನ ಅವತಾರ. ಆದ್ದರಿಂದ ಆರ್ಯರಲ್ಲದ ದ್ರಾವಿಡರು ಹಿಂದೂಗಳಲ್ಲವೆಂಬ ಸಂಶಯ ಸರಿಯಲ್ಲ.

ನಾನು ಬರೆದ ಲೇಖನಗಳಲ್ಲಿ ಪಾಡ್ದನ ಹೇಳುವವರು ಗೌಡರೆಂದು ಯಾವ ಲೇಖನದಲ್ಲೂ ಬರೆಯಲಿಲ್ಲ. ಪಾಡ್ದನ ಹೇಳುವ ಅಜಲ ಮುಂತಾದವರು ಬಹುಷ್ಯ ಹಾಸನ ಜಿಲ್ಲೆಯ ಐಗೂರು ಸೀಮೆಯಿಂದ ಬಂದವರಾಗಿದ್ದು ಅವರೊಡನೆ ಭೂತಗಳೂ ಬಂದು ತುಳುನಾಡಿಗೆ ಬಂದುದರಿಂದ ತುಳು ಭಾಷೆಯನ್ನು ಕಲಿತು ಪಾಡ್ದನವನ್ನು ಹೇಳುವುದಕ್ಕೆ ಪ್ರಾರಂಭಿಸಿದರೆಂದೂ ತುಳು ಪಾಡ್ದನ ಗೌಡರದಲ್ಲವೆಂದು ಬರೆದಿದ್ದೇನೆ. ಉದಾಹರಣೆಗೆ ಕೊಡಗಿಗೆ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗೆ ಕೇರಳದಿಂದ ಬಂದ ಪಣಿಕ್ಕರು ವಿಷ್ಣು ಮೂರ್ತಿ ಮುಂತಾದ ಭೂತವನ್ನು ಕುಟ್ಟುವಾಗ ಅವರು ಹೇಳುವ ವಕ್ಕಣೆಗಳೆಲ್ಲಾ ಮಲೆಯಾಳದಲ್ಲಿದ್ದು ಮಲೆಯಾಳ ಮಾತಾಡುವ ಭೂತಗಳನ್ನ ಪೂಜಿಸುವ ಗೌಡರು ಮಲೆಯಾಳದಿಂದ ಬಂದವರೆಂದು ಹೇಳುವುದು ಸರಿಯಲ್ಲವೆಂದು ಹೇಳಿದ್ದೇನೆ. ಬಂಟರಿಗೆ 8 ಬಳಿಗಳು, ಬಿಲ್ಲವರಿಗೆ 14 ಬಳಿಗಳಿವೆ ಎಂಬುದಾಗಿ ನಾನು ಬರೆದಿರುವುದು ಕರ್ನಾಟಕ ಸರ್ಕಾರ ಪ್ರಕಟಿಸಿರುವ ದಕ್ಷಿಣ ಕನ್ನಡ ಜಿಲ್ಲೆಯ ಗೆಜೆಟಿಯರ್‌ನ್ನು ಓದಿ ಬರೆದಿರುವುದು ಡಾ|| ಪುರುಷೋತ್ತಮ ಬಿಳಿಮಲೆಯವರು ಈ ಗೆಜೆಟಿಯರ್‌ಗಳನ್ನು ಓದಿದರೆ ತಿಳಿಯಬಹುದು.

ನಾನು ಯಾವುದೇ ಲೇಖನವನ್ನ ಆಧಾರ ಗ್ರಂಥಗಳ ಸಹಾಯವಿಲ್ಲದೆ ಬರೆಯುವುದಿಲ್ಲ. ಆ ರೀತಿ ಬರೆದರೆ ತಪ್ಪಾಗುವುದು ನಮ್ಮ ಯುವಕರು ಮತ್ತು ಯುವತಿಯರು ನಮ್ಮ ಜನಾಂಗದ ಚರಿತ್ರೆ ಯಾ ಸಂಸ್ಕೃತಿಯನ್ನ ಬರೆಯುವಾಗ ಅವುಗಳಿಗೆ ಗ್ರಂಥಾದಾರಿತ ವಸ್ತುಗಳಿಂದ ಬರೆದರೆ ಸಾಮಾನ್ಯ ಜನರಿಗೆ ಪ್ರಯೋಜನವಾಗುವುದೆಂದು ನನ್ನ ಅಭಿಪ್ರಾಯ.

ಡಾ|| ಪುರುಷೋತ್ತಮ ಬಿಳಿಮಲೆಯವರಿಗೆ ವಂದನೆಗಳು.

ಲೇಖಕ : ಪ್ರೊ. ಪೂಜಾರಿ ಮೊಣಪ್ಪ



**13ನೇ ಪುಟದಿಂದ**

ಕಳ್ಳತನದಲ್ಲಿ ಎತ್ತಿಕೊಂಡು ಬಂದು ಇಲ್ಲಿ ಈ ರೀತಿ ಮಲಗಿಸಿದ್ದು ಯಾರು?"

"ಅದನ್ನು ನೀವೇ ಹೇಳಬೇಕು?"

"ವಾಟ್ ಡುಯೂ ಮೀನ್?"

ಪೋಲಿಸ್ ಅಧಿಕಾರಿ "ನಿಮ್ಮ ಫ್ಯಾಮಿಲಿಗೆ ಆಗದೆ ಇರೋವ್ರು ಯಾರೋ ಸೇಡು ತೀರಿಸಿಕೊಳ್ಳಲು ಈ ಕೆಲಸ ಮಾಡಿರಬೇಕು."

ಬೆಚ್ಚಿಬಿದ್ದನು ಪ್ರಸನ್ನ !

ಸೇಡು..... ಸೇಡು...... ಯಾರಿಗಿದೆ?

ಪೋಲಿಸ್ ಅಧಿಕಾರಿ "ಇದು ನಾಲ್ಕನೆಯ ಘಟನೆ. ಈ ಹಿಂದೆ ಮೂರು ಮಂದಿ ಇದೇ ರೀತಿ ಸತ್ತಿರುವುದರಿಂದ ಪೋಲಿಸ್ ಇಲಾಖೆಯಿಂದ ಸುತ್ತೋಲೆ ಬಂದಿದೆ. ಈ ನಿಗೂಢ ಸಾವುಗಳ ಬಗ್ಗೆ ತನಿಖೆ ನಡೆಸಿ ಅಂತ"

ಜನಗಳು ಭಯಗೊಂಡರು !

ಪ್ರಸನ್ನ ಚಿಂತಿಸುತ್ತಿದ್ದಾನೆ.

ರೇವತಿ ಮುಂದೆ ಬರುತ್ತಾ "ಯೂ ಆರ್ ರೈಟ್ ಆಫೀಸರ್" ಈ ನಿಗೂಢ ಪ್ರಕರಣಗಳ ಹಿಂದೆ ಮನುಷ್ಯನ ಕೈವಾಡ ಇದೆ. ನನಗೆ ಕೆಲವು ಆಧಾರಗಳು, ಸುಳಿವುಗಳು ದೊರೆತಿವೆ. ನೀವು ತನಿಖೆ ನಡೆಸಿ ನಾನು ಸಹ ಸಹಕರಿಸುತ್ತೇನೆ" ಎಂದಳು.

ಪಬ್ಲಿಕ್ ಸ್ಟೇಟ್‌ಮೆಂಟ್ !

ರೇವತಿ ಈಗ ಅಪಾಯವನ್ನು ತಾನಾಗಿಯೇ ಆಹ್ವಾನಿಸಿದ್ದಳು.

ಗುಂಪಿನಲ್ಲಿ ಇದ್ದ ವ್ಯಕ್ತಿಯೊಂದು ಈಗ ಕೋಪದಿಂದ ಅವಳನ್ನು ನೋಡುತ್ತಿತ್ತು !

ಇನ್ನು ರೇವತಿ ಬದುಕಿರಬಾರದು !

(ಮುಂದುವರೆಯುತ್ತದೆ)

## ಲಗ್ನ ಕಾರ್ಯಗ

1. ಅವಂದೂರು ಗ್ರಾಮದ ಪಟ್ಟಡ ತಮ್ಮಣ್ಣನವ್ರ ಮಗ್ಳು **ಪವಿತ್ರ**ಂಗೂ ಮತ್ತೆ ಕೊಳಗದಾಳು ಗ್ರಾಮದ ಅಣ್ಣೆಚೀರ ಮಾದಪ್ಪನವ್ರ ಮಂಜ **ಜಯಂತ**ಂಗೂ ತಾರೀಖ್ 17-5-2000 ಲಿ ಬೆಂಗುನಾಡು ಕೊಡವ ಸಮಾಜ, ಚೇರಂಬಾಣೆಲಿ ಮದ್ವೆ ಬಾರೀ ಲಾಯ್ಕಾಗಿ ಕಳ್ತ್.

2. ಸೋಮವಾರಪೇಟೆಯ ಉದಯಪ್ರೆಸ್ ಮಾಲಿಕ ಕುದ್ಕುಳಿ ರಾಮಪ್ಪನವ್ರ ಮಂಜ **ಬೋಜರಾಜ**ಂಗೂ ಮತ್ತೆ ಅರ್ವತ್ತೊಕ್ಲು ಗ್ರಾಮದ ಕೋಳುಮಾಡಣ ತಮ್ಮಯ್ಯನವ್ರ ಮಗ್ಳು **ಚಂದ್ರಕಲಾ**ಂಗೂ ತಾರೀಖ್ 7-5-2000 ಲಿ ಕೆಳ್ಗಿನ ಗೌಡ ಸಮಾಜ ಕಲ್ಯಾಣ ಮಂಟಪಲಿ ಬಾರೀ ಗೌಜ್‌ಲಿ ಕಳ್ತ್.

3. ಕೊಡಿಗೆ ನಿವಾಸಿ ಮೂಲೆಮಜ್ಲು ದಿ. ಕಾಳಪ್ಪನವ್ರ ಪುತ್ರಿ **ಭಾನುಮತಿ**ಗೂ ಮತ್ತೆ ಹಾಸನ ತಾಲ್ಲೂಕು ಗವೇನಹಳ್ಳಿ ಶ್ರೀ ಕೆಂಪೆಗೌಡರ ಮಂಜ ಜಿ. ಕೆ. **ಶಿವಪ್ರಕಾಶ್**ಗೂ ತಾರೀಖ್ 7-5-2000ಲಿ ಕುಶಾಲನಗರ ಗೌಡ ಸಮಾಜಲಿ ಮದ್ವೆ ಕಳ್ತ್.

## ❋ ಪೂಜ್ಯ ಹಿರಿಯರ ಚಿರಸ್ಮರಣೆ ❋



ದಿ. ಪಟ್ಟಡ ಕಾರ್ಯಪ್ಪ ಮುತ್ತಂಣ
ಜನನ : 12-5-1905
ಮರಣ : 29-5-1986

ನೀವು ಕಾಲಕಂಡು ಸಾಕಷ್ಟು ಸಮಯ ಕಳೆದರು ಸದಾ ನಮ್ಮ ನೆನಪಿನಲ್ಲಿರುವಿರಿ. ನೀವು ನಮಗೆ ದಾರಿದೀಪವಾಗಿ ಸಂಗಾತಿಯನ್ನು ಹುಟ್ಟು ಹಾಕಲು ಪ್ರೇರೆಪಿಸಿದ್ದೀರಿ ಮತ್ತು ಕೈ ಹಿಡಿದು ಮುನ್ನೆಡೆಸುತ್ತಿದ್ದೀರಿ. ನಮ್ಮ ಸ್ಮೃತಿಪಠಲದಲ್ಲಿ ಅನುದಿನವು ನೆಲೆಸಿರುವ ನೀವು ಇಂದು ನಮ್ಮೆಲ್ಲರನ್ನು ಹರಸುವ ಪೂಜ್ಯರಾಗಿದ್ದೀರಿ. ಮಕ್ಕಳು, ಸೊಸೆಯಂದಿರು, ಅಳಿಯಂದಿರು, ಮೊಮ್ಮಕ್ಕಳು, ಮರಿ ಮಕ್ಕಳು ಹಾಗೂ ಅಪಾರ ಬಂಧು ಬಳಗದವರು

" ಸತ್ಯವೇ ತಾಯಿ ತಂದೆ "



ದಿ. ಪಟ್ಟಡ ನೀಲವ್ವ ಮುತ್ತಂಣ
ಜನನ : 20-5-1919
ಮರಣ : 6-5-1974

### ಚಂದದಾರರಲ್ಲಿ ವಿನಂತಿ

ಕೊಡಗು ಸಂಗಾತಿಯನ್ನು ನವೀಕರಣಗೊಳಿಸದೆ ಇರುವ ಚಂದದಾರರು ಕೂಡಲೇ ನಗದು/M.O./D.D ಮೂಲಕ ನವೀಕರಿಸುವಂತೆ ನಮ್ಮ ವಿನಂತಿ. ಮೈಸೂರಿನ ಸ್ಥಳೀಯ ಚೆಕ್‌ಗಳನ್ನು ಸ್ವೀಕರಿಸಲಾಗುವುದು. ಈ ಪ್ರಯುಕ್ತ ಹಿಂದೆ ಸಂಗಾತಿಯಲ್ಲಿ ಪ್ರಕಟಿಸಿದ ಪ್ರತಿನಿಧಿಗಳನ್ನು ಸಂಪರ್ಕಿಸುವುದು. ದೂರದ ಮೂಲೆ ಮೂಲೆಗಳಿಗೆ ಚಂದಾವಸೂಲಾತಿಗಾಗಿ ಬರುವುದಕ್ಕೆ ಕಷ್ಟ ಸಾಧ್ಯವು. ಆದಾಯಕ್ಕಿಂತ ವ್ಯಯವು ಹೆಚ್ಚಾಗುವುದರಿಂದ ಚಂದದಾರರು ನೇರವಾಗಿ ನಮ್ಮ ಪ್ರತಿನಿಧಿಗಳನ್ನು ಅಥವಾ ಸಂಗಾತಿ ಕಛೇರಿಯನ್ನು ಸಂಪರ್ಕಿಸಿ ಎಂದಿನಂತೆ ಸಹಕರಿಸುವಂತೆ ನಮ್ಮ ಕಳಕಳಿಯ ಪ್ರಾರ್ಥನೆಯಾಗಿದೆ.

— ಸಂಪಾದಕಿ

### ಚಂದಾರರಗಮನಕ್ಕೆ

ತಾವುಗಳು ಸಂಗಾತಿಯ ಚಂದಾದಾರರಾಗಿ ತಮಗೆ ಪತ್ರಿಕೆ ಬರುತ್ತಿರಬಹುದು. ತಪ್ಪಾದ ವಿಳಾಸವಿದ್ದರೂ ಸಹ ತಮಗೆ ಅಂಚೆ ಪೇದೆಯ ಪರಿಚಯದ ಮೂಲಕ ಪತ್ರಿಕೆ ಸಿಗುತ್ತಿರಬಹುದು.ಅಂತಹ ಚಂದಾದರರು ತಮ್ಮಸರಿಯಾದ ವಿಳಾಸವನ್ನು ಸಂಗಾತಿಗೆ ಕಳುಹಿಸಿ ಕೊಡುವಂತೆ ಕೋರಿಕೆ. ನಿಮ್ಮ ಸಹಕಾರಕ್ಕೆ ವಂದನೆಗಳು.

— ಸಂಪಾದಕಿ

### ವರ ಬೇಕಾಗಿದೆ

5'.6" ಎತ್ತರವಿರ್ರು 22 ವರ್ಷದ, ಬಿ.ಎ. ಓದಿರ್ರು ಯುವತಿಗೆ (ಗೂಡೆಗೆ) ಹೈದ ಬೇಕು. ಹವ್ಯಾಸಗ : ಪುಸ್ತಕ ಓದುದು, ಅಡಿಗೆ ಮಾಡಿಕೆ ಲಾಯ್ಕ ಬಂದದೆ. ಒಳ್ಳೆ ಕನಿಕರ ಇರ್ರುಗೂಡೆ. ಉತ್ತಮ ಕುಲ ಸಂಪ್ರದಾಯದ ಹೆಮ್ಮನ ಗೋತ್ರದವಳು. ಹೈದ ಸರ್ಕಾರಿ ಕೆಲಸಲಿ ಇದ್ದರೂ ಆದೆ. ಇಲ್ಲೇತೇಳಿರೆ ಐದಾರು ಎಕ್ರೆ ಕಾಫಿ ತೋಟ ಇದ್ದವು ಸಹ ಆದವೆ. ಇಷ್ಟ ಇರ್ರು ಹೈದಂಗ ಬರ್ಕಣಕ್.

ಬಾಕ್ಸ್ ನಂ. 6, C/o ಕೊಡಗು ಸಂಗಾತಿ, ಮೈಸೂರು. Ph : 0821 - 516771



ತಡಿಯಪ್ಪನ ಪೂವಯ್ಯ
ಮರಣ : 5-5-1969

### ಚಿರಸ್ಮರಣೆ

ನೀವು ನಮ್ಮನ್ನು ಆಗಲಿ 3 ದಶಕಗಳಿಗೂಹೆಚ್ಚು ಸಂವತ್ಸರಗಳು ಸಂದರೂ ಸಹ ನಿಮ್ಮ ಸವಿನೆನಪು ಸದಾ ನಮ್ಮ ಹೃದಯದಲ್ಲಿ ಹಚ್ಚಹಸಿರಾಗಿ ಉಳಿದಿದೆಯಲ್ಲದೆ ಸದಾ ನಿಮ್ಮ ಆಶೀರ್ವಾದ ನಮ್ಮ ಮೇಲೆ ಇರಲೆಂದು ಬಯಸುವ,

ಪತ್ನಿ: ಸಾಕಮ್ಮ, ಮಕ್ಕಳು,
ಅಳಿಯಂದಿರು, ಸೊಸೆಯಂದಿರು,
ಮೊಮ್ಮಕ್ಕಳು ಹಾಗೂ ಮರಿಮಕ್ಕಳು

ಪ್ರಕಟಣೆ : ಟಿ.ಪಿ. ಕುಮಾರಜಯ

## ಗುಜರಾತ್ ರಾಜ್ಯ ಮಟ್ಟದ ಸ್ಪರ್ಧೆಯಲ್ಲಿ ಚಿನ್ನದ ಪದಕ ವಿಜೇತೆ ಕಿಶೋರಿ ಅಶ್ವಿತ ಸತೀಶ್‌ಕುಮಾರ್



ಕಾನೆಹಿತ್ಲು ಅಶ್ವಿತ ಸತೀಶ್‌ಕುಮಾರ್ ಇವಳು ಎರಡನೇ ತರಗತಿಯಲ್ಲಿ ರಿಲೇಯನ್ಸ್ ಕೋಕಿಲಬೇನ್ ಧಿರುಬಾಯಿ ಅಂಬಾನಿ ವಿದ್ಯಾಮಂದಿರ, ಜಾಮ್‌ನಗರ್, ಗುಜರಾತ್ ಇಲ್ಲಿ ಓದುತ್ತಿರುವ ಬಾಲೆ. ಇವಳು 1999ರ ಸಾಲಿನ ಎರಡು ಕಲಾ ಸ್ಪರ್ಧೆಗಳಲ್ಲಿ ಭಾಗವಹಿಸಿ, ಎರಡರಲ್ಲು ಪ್ರಶಸ್ತಿ ಪಡೆದ ಕಲಾವಿದೆ. ಕ್ಯಾಮಲಿನ್, ಎಸ್. ಕುಮಾರ್ಸ್ ಹಾಗೂ ಇಂಡಿಯನ್ ಎಕ್ಸ್‌ಪ್ರೆಸ್‌ನವರು ನಡೆಸಿದ "ಆಲ್ ಇಂಡಿಯಾ ಕಲರ್ ಕಾಂಟೆಸ್ಟ್ - 99" 'ಬಿ' ಗ್ರೂಪ್‌ನಲ್ಲಿ ಅಶ್ವಿತ ರಾಜ್ಯಮಟ್ಟದಲ್ಲಿ ಮೊದಲ ಬಹುಮಾನ ಪಡೆದ ಕಿಶೋರಿ. ಅಲ್ಲದೆ ಅಂಜುಮಾನ್ - ಫಸ್ಟ್ ಆಲ್ ಇಂಡಿಯಾ ಚೈಲ್ಡ್ ಆರ್ಟ್ ಎಕ್ಸಿಬಿಷನ್ -99 ಇದರಲ್ಲೂ ಕಲಾ ಪ್ರಶಸ್ತಿ ಪಡೆದಿದ್ದಾಳೆ. ಇವಳು ಕಾನೆಹಿತ್ಲು ಎಸ್. ಸತೀಶ್‌ಕುಮಾರ್ ಹಾಗೂ ಅಮಿತ ದಂಪತಿಗಳ ಪುತ್ರಿಯಾಗಿದ್ದಾಳೆ. ಇವಳ ತಂದೆ ಗುಜರಾತಿನ ಜಾಮ್ ನಗರದಲ್ಲಿ ರಿಲೇಯನ್ಸ್ ಸಂಸ್ಥೆಯ ಉದ್ಯೋಗಿಯಾಗಿದ್ದಾರೆ.

ಇವಳು ದಿನಾಂಕ 10-9-1992ರಲ್ಲಿ ಜನಿಸಿದ್ದು ಈ ಪುಟ್ಟ ವಯಸ್ಸಿನಲ್ಲಿಯೇ ರಾಜ್ಯ ಮಟ್ಟದ ಸ್ಪರ್ಧೆಯಲ್ಲಿ ಭಾಗವಹಿಸಿ ಚಿನ್ನದ ಪದಕವನ್ನು ಗಳಿಸಿರುವುದು ನಿಜಕ್ಕೂ ಅರೆಭಾಷೆಯ ಲೋಕಕ್ಕೆ ಹೆಮ್ಮೆಯ ಸಂಗತಿ.

ಕುಲದೇವ್ರು ವೆಂಕಟರಮಣನ ಕೃಪಾಕಟಾಕ್ಷೆಯಿಂದ ಇನ್ನು ಹೆಚ್ಚಿನ ಕೀರ್ತಿಯನ್ನು ಜನಾಂಗಕ್ಕೆ ತರಲೆಂದು ಜನಾಂಗದ ಪರವಾಗಿ ಶುಭವನ್ನು ಹಾರೈಸೋಣ.

ALL-INDIA CAMEL COLOUR CONTEST '99

CERTIFICATE

*of merit awarded*

*to* Ashwitha K.S.

*of* K.D.Ambani School, Jamnagar

*for winning the* 1st *prize*

*in group* B *at the state level.*



JUDGES' SIGNATURES

Co-sponsors: S. Kumars, The Indian EXPRESS

Presented by Camlin

Camlin Limited, Consumer Products Division, J. B. Nagar, Andheri (E), Mumbai - 400 059. India



ALL-INDIA CAMEL COLOUR CONTEST '99

Certificate

of merit awarded

to Ashwitha K.S.

of K.D. Ambani Vidyamandir

for the best entry

in group 'B' at the school level.

Co-sponsors: S. Kumars, The Indian EXPRESS

Presented by Camlin

Camlin Limited, Consumer Products Division, J.B Nagar, Andheri (E), Mumbai-400 059. India

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.